WPP-47

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೪೭ | ಬೆಂಗಳೂರು, ಗುರುವಾರ, ಮಾರ್ಚ್ ೨೨, ೨೦೧೨ (ಚೈತ್ರ ೨, ಶಕ ವರ್ಷ ೧೯೩೩) | ಸಂಚಿಕೆ ೧೨ |
|---|---|---|


## ಭಾಗ – ೩

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

### ನೋಂದಣಿ ಮತ್ತು ಮುದ್ರಾಂಕ ಇಲಾಖೆ

**ನೇಮಕಾತಿ ಆದೇಶ**

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಉಡುಪಿ ಜಿಲ್ಲೆಯ ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ಅಭ್ಯರ್ಥಿಗಳನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ:21–11–2001 ರನ್ವಯ ಪ್ರಕಟಿಸಿರುವ ಬ್ಯಾಕ್‌ಲಾಗ್ ನೇಮಕಾತಿ ನಿಯಮಗಳು 2001.

2) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಅವರ ರೀ–ಅಲಾಟ್‌ಮೆಂಟ್ ಆದೇಶ ಸಂಖ್ಯೆ: ಇಎಸ್‌ಟಿ–1–273/01–02 ದಿ:24–09–2011.

**ಪ್ರಸ್ತಾವನೆ:–**

ಈ ಇಲಾಖೆಯ ಕೆಳಕಂಡ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳು ಇರುತ್ತವೆಂದು ಗುರುತಿಸಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ. ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1 | ಉಡುಪಿ ಜಿಲ್ಲೆ | ಎರಡು | ಒಂದು | ಮೂರು |

ತದನಂತರ ಮೇಲ್ಕಂಡಂತೆ ಗುರುತಿಸಲ್ಪಟ್ಟ ಪರಿಶಿಷ್ಟ ಪಂಗಡದ ಈ ಒಂದು ಬ್ಯಾಕ್‌ಲಾಗ್ ಹುದ್ದೆಯಲ್ಲಿ ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಅಭ್ಯರ್ಥಿಯಾದ ನಾಗರಾಜ ಬಿ ಓಲೇಕಾರ ಎಂಬುವರನ್ನು ಮತ್ತು ಮೇಲ್ಕಂಡಂತೆ ಗುರುತಿಸಲ್ಪಟ್ಟ ಪರಿಶಿಷ್ಟ ಜಾತಿಯ ಎರಡು ಬ್ಯಾಕ್‌ಲಾಗ್ ಹುದ್ದೆಗಳ ಪೈಕಿ ಒಂದು ಬ್ಯಾಕ್‌ಲಾಗ್ ಹುದ್ದೆಯಲ್ಲಿ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಅಭ್ಯರ್ಥಿಯಾದ ಮಂಡಲೀಕ ಮಾರುತಿ ಕೆಂಪರಾಯಗೋಳ ಎಂಬುವರನ್ನು ದ್ವಿತೀಯ ದರ್ಜೆ ಸಹಾಯಕರೆಂದು ಈಗಾಗಲೇ ನೇಮಕಮಾಡಿಕೊಳ್ಳಲಾಗಿದೆ.

ಆದರೆ ಮೇಲ್ಕಂಡಂತೆ ಗುರುತಿಸಲ್ಪಟ್ಟು ಭರ್ತಿಯಾಗದೇ ಉಳಿದ ಪರಿಶಿಷ್ಟ ಜಾತಿಯ ಇನ್ನೊಂದು ಬ್ಯಾಕ್‌ಲಾಗ್ ಹುದ್ದೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕಗೊಂಡ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಅಭ್ಯರ್ಥಿಗಳು ಯಾರೂ ಈ ಜಿಲ್ಲೆಯಲ್ಲಿ ಕೆಲಸಕ್ಕೆ ಹಾಜರಾಗದ ಕಾರಣ ಇವರುಗಳಿಗೆ

ನೀಡದ ನೇಮಕಾತಿ ಆದೇಶಗಳನ್ನು ಕಾನೂನು ರೀತ್ಯಾ ರದ್ದುಪಡಿಸಿ ಈ ವಿಷಯವನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ತಿಳಿಸಲಾಯಿತು.

ಈಗ ಮೇಲ್ಕಂಡಂತೆ ಗುರುತಿಸಲ್ಪಟ್ಟು ಭರ್ತಿಯಾಗದೇ ಉಳಿದ ಪರಿಶಿಷ್ಟ ಜಾತಿಯ ಈ ಇನ್ನೊಂದು ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕಾತಿ ಮಾಡಿಕೊಳ್ಳುವುದಕ್ಕಾಗಿ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಉಲ್ಲೇಖ (2)ರ ಅವರ ರೀ–ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ನೇಮಕಾತಿಗಾಗಿ ಅಲಾಟ್ ಮಾಡಿ ಈ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

## ಆದೇಶ

**ಸಂಖ್ಯೆ: ಸಿಬ್ಬಂದಿ: 30:2011–12 ದಿನಾಂಕ: 29–02–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (1) ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (2) ರಲ್ಲಿನ ರೀ–ಆಲಾಟ್‌ಮೆಂಟ್ ಆದೇಶದಲ್ಲಿ ಕಂಡು ಬಂದ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಈ ಜಿಲ್ಲೆಯಲ್ಲಿ ಖಾಲಿ ಇರುವ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯಲ್ಲಿ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ Rs. 5800–100–6000–125–6500–150–7100–175–7800–200–8600–225–9500–250–10500 ರ ವೇತನ ಶ್ರೇಣಿಯಲ್ಲಿ ಇತರೆ ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಲಾಗಿದೆ. ಹಾಗೂ ಕೆಳಕಂಡ ಅಭ್ಯರ್ಥಿಯನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ದ್ವಿತೀಯ ದರ್ಜೆ ಸಹಾಯಕರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC / ST | ಜನ್ಮ ದಿನಾಂಕ | 7–9–2002 ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ– ತಿಂ– ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ಬಸಪ್ಪ ಲಕ್ಕವ್ವ ಹೊಲೇರ, ಮುಕ್ಕಾಂ–ಪೋಸ್ಟ್, ಕೋರವಾರ ತಾಲ್ಲೂಕು:ಸಿಂದಗಿ, ಜಿಲ್ಲೆ:ಬಿಜಾಪುರ–586120 | SC | 01–06–1969 | 33–03–2006 | S.S.L.C: 70.500 | ಉಪ ನೋಂದಣಿ ಕಛೇರಿ, ಕುಂದಾಪುರ (ಉಡುಪಿ ಜಿಲ್ಲೆ) (ಇಲ್ಲಿರುವ ಖಾಲಿ ಹುದ್ದೆಗೆ) | ಪರಿಶಿಷ್ಟ ಜಾತಿ ಗ್ರಾಮೀಣ ಅಭ್ಯರ್ಥಿ ಹೆಚ್ಚುವರಿ ಪಟ್ಟಿ |

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ ಮತ್ತು ಅಭ್ಯರ್ಥಿಗಳು ಈ ಕೆಳಕಂಡ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು:–**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು, ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದು ಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
3. ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಪರೀಕ್ಷಾರ್ಥ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.

4. ಅರ್ಹತಾ ಪರೀಕ್ಷೆ ಅವಧಿಯು ಎರಡು ವರ್ಷಗಳೆಂದು ನಿಗಧಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿನ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗಧಿ ಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್ (ಪ್ರೊಬೇಷನ್) ರೂಲ್ಸ್ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.

5. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.

6. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957 ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.

7. ಈ ಆದೇಶ ಮುಟ್ಟಿದ 15 (ಹದಿನೈದು)ದಿನಗಳ ಅವಧಿಯೊಳಗೆ ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗಧಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.

8. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.

9. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ನಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು

10. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ

11. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್ (ಸಿ.ಸಿ.ಎ) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು

12. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಲ್ಲಿ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದು ಪಡಿಸಲಾಗುವುದು.

13. ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.

14. ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.

15. ಅಭ್ಯರ್ಥಿಯು ಕೆಳಕಂಡ ದಾಖಲೆಗಳನ್ನು ತಾವು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.

(1) ಅಭ್ಯರ್ಥಿಯು ತಮ್ಮ Passport Size ನ ಎರಡು ಇತ್ತೀಚಿನ ಫೋಟೋ.

(2) ವಿದ್ಯಾರ್ಹತೆಯ ಬಗ್ಗೆ **SSLC** ಮೂಲ ಅಂಕಪಟ್ಟಿ (Original)

(3) ಜನ್ಮ ದಿನಾಂಕದ ಬಗ್ಗೆ ಶಾಲೆಯಿಂದ ನೀಡಿದ ಮೂಲ T.C (Original)

(4) ಅಭ್ಯರ್ಥಿಯು ಗ್ರಾಮೀಣ ಅಭ್ಯರ್ಥಿಯಾಗಿರುವುದರಿಂದ ಗ್ರಾಮೀಣ ಮೀಸಲಾತಿ ನಮೂನೆ-2 ರ ಮೂಲ ಪ್ರಮಾಣ ಪತ್ರ (Original)

(5) ಸಂಬಂಧ ಪಟ್ಟ ಸರ್ಕಾರಿ ಜಿಲ್ಲಾ ಸರ್ಜನ್‌ನಿಂದ ನಿಗಧಿತ ನಮೂನೆಯಲ್ಲಿ ಪಡೆದ ವೈದ್ಯಕೀಯ ದೈಹಿಕ ಪ್ರಮಾಣ ಪತ್ರ (Original) ( Physical Fitness Certificate)

(6) ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರ (Original)

ಅಭ್ಯರ್ಥಿಯು ಕೆಳಕಂಡ ನಮೂನೆಗಳನ್ನು ಮತ್ತು ಮುಚ್ಚಳಿಕೆಗಳನ್ನು ಕೆಲಸಕ್ಕೆ ಹಾಜರಾಗುವ ಮುನ್ನ ತಪ್ಪದೆ ಬರೆದು ಕೊಡತಕ್ಕದ್ದು.

16. ಅಭ್ಯರ್ಥಿಯು ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ಪ್ರತಿಜ್ಞಾ ವಿಧಿಯನ್ನು ಇದಕ್ಕೆ ಲಗತ್ತಿಸಿರುವ ನಮೂನೆಯಲ್ಲಿ ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಈ ಕಛೇರಿಯ ಮುಖ್ಯಸ್ಥರಿಗೆ ಬರೆದು ಕೊಡತಕ್ಕದ್ದು.

17. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ನಿಯಮ 28 ರ ರೀತ್ಯ ಇದಕ್ಕೆ ಲಗತ್ತಿಸುವ ನಮೂನೆಯಲ್ಲಿರುವ ಘೋಷಣಾ ಪತ್ರವನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರಿಗೆ ಬರೆದುಕೊಡತಕ್ಕದ್ದು.

18. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿದ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದು ಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957 ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ಧನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು ರೂ 20 ರ ಛಾಪಾ ಕಾಗದದಲ್ಲಿ ಇದಕ್ಕೆ ಲಗತ್ತಿಸಿರುವ ಮುಚ್ಚಳಿಕೆ ನಮೂನೆ–1 ಅನ್ನು ಕೆಲಸಕ್ಕೆ ಹಾಜರಾಗುವ ಮುನ್ನ ಈ ಕಛೇರಿಗೆ ಬರೆದುಕೊಡತಕ್ಕದ್ದು.

19. ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ಯಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತುಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆಯಿಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು ರೂ. 20 ಛಾಪಾ ಕಾಗದದಲ್ಲಿ ಇದಕ್ಕೆ ಲಗತ್ತಿಸಿರುವ ಮುಚ್ಚಳಿಕೆ ನಮೂನೆ–2 ಅನ್ನು ಕೆಲಸಕ್ಕೆ ಹಾಜರಾಗುವ ಮುನ್ನ ಈ ಕಛೇರಿಗೆ ಬರೆದುಕೊಡತಕ್ಕದ್ದು.

20. ಸರ್ಕಾರದವರು ಈ ಹಿಂದೆ ಜಾರಿಯಲ್ಲಿದ್ದ ನಿವೃತ್ತಿ ಪಿಂಚಣಿ ಸೌಲಭ್ಯ ಯೋಜನೆಗೆ ಬದಲಾಗಿ ದಿ:01–04–2006 ರಿಂದ ಜಾರಿಗೆ ಬರುವಂತೆ ಸರ್ಕಾರದ ಆದೇಶ ಸಂಖ್ಯೆ: FD(SPL)-04 PET 2005 ದಿ:31–03–2006ರ ಆದೇಶದಲ್ಲಿ ಹೊಸದಾಗಿ New Defined Contributory Pension Scheme ಎಂಬ ಹೊಸ ಪಿಂಚಣಿ ಯೋಜನೆಯನ್ನು ಜಾರಿಗೆ ತಂದಿರುತ್ತಾರೆ. ಈ ಹೊಸ ಪಿಂಚಣಿ ಯೋಜನೆಯು ದಿ:01–04–2006 ರಿಂದ ಅಥವಾ ತದನಂತರ ನೇಮಕಾತಿ ಹೊಂದಿದ ಎಲ್ಲಾ ರಾಜ್ಯ ಸರ್ಕಾರಿ ನೌಕರರಿಗೆ ಅನ್ವಯಿಸುತ್ತದೆ ಎಂದು ಆದೇಶ ಮಾಡಿರುತ್ತಾರೆ. ಆದ್ದರಿಂದ ಈ ಜಿಲ್ಲೆಯಲ್ಲಿ ನೇಮಕ ಹೊಂದಿದ ಸದರಿ ನೌಕರರು ದಿನಾಂಕ 31–03–2006ರ ಸದರಿ ಸರ್ಕಾರದ ಆದೇಶದನ್ವಯ ಹೊಸ ಪಿಂಚಣಿ ಯೋಜನೆಗೆ ಒಳಪಡುತ್ತಾರೆಂದು ಈ ಮೂಲಕ ಆದೇಶಿಸಿದೆ ಹಾಗೂ ದಿ:31–03–2006ರ ಸದರಿ ಸರ್ಕಾರದ ಆದೇಶದಲ್ಲಿನ ನಿರ್ದೇಶನಕ್ಕೆ ಸದರಿ ನೌಕರರು ಬದ್ದರಾಗಿರತಕ್ಕದ್ದು.

21. ಈ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗುವ ಮುನ್ನ ಅವರ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ತಪ್ಪದೇ ಹಾಜರ್‌ಪಡಿಸತಕ್ಕದ್ದು ಎಂಬ ಷರತ್ತಿಗೆ ಒಳಪಡಿಸಿ ಈ ನೇಮಕಾತಿ ಆದೇಶ ನೀಡಲಾಗಿದೆ. ಇದಕ್ಕೆ ಈ ಅಭ್ಯರ್ಥಿಯು ಬದ್ದರಾಗಿರತಕ್ಕದ್ದು.

22. ಒಂದು ವೇಳೆ ನಿಮಗೆ ಕೆಲಸಕ್ಕೆ ಹಾಜರಾಗಲು ಇಷ್ಟವಿಲ್ಲದಿದ್ದಲ್ಲಿ ಇಷ್ಟವಿಲ್ಲವೆಂಬ ಮಾಹಿತಿ ಇರುವ ನಿಮ್ಮ ಮನವಿಯನ್ನು ಇದಕ್ಕೆ ಲಗತ್ತಿಸಿರುವ ಮುಚ್ಚಳಿಕೆ ನಮೂನೆಯಲ್ಲಿ 20/– ರೂ. ಛಾಪಾ ಕಾಗದಲ್ಲಿ ಬರೆದು ನೋಟರಿ ಸಮಕ್ಷಮ ಸಹಿ ಮಾಡಿ ಸದರಿ ನಮೂನೆಯನ್ನು ಈ

ನೇಮಕಾತಿ ಆದೇಶ ನಿಮಗೆ ತಲುಪಿದ ದಿನಾಂಕದಿಂದ ಹದಿನೈದು ದಿನಗಳೊಳಗೆ ಈ ಕಛೇರಿಗೆ ತಪ್ಪದೇ ಕಳುಹಿಸುವಂತೆ ನಿಮಗೆ ತಿಳಿಸಿದೆ ಇದರೊಂದಿಗೆ ಮುಚ್ಚಳಿಕೆ ನಮೂನೆಯನ್ನು ಲಗತ್ತಿಸಿ ಕಳುಹಿಸಲಾಗಿದೆ.

23. ಒಂದು ವೇಳೆ ನೀವು ಈ ನೇಮಕಾತಿ ಆದೇಶ ತಲುಪಿದ ದಿನಾಂಕದಿಂದ ಹದಿನೈದು ದಿನಗಳೊಳಗೆ ನಿಮ್ಮನ್ನು ನೇಮಕ ಮಾಡಿದ ಕಛೇರಿಯಲ್ಲಿ ನೀವು ಕೆಲಸಕ್ಕೆ ಹಾಜರಾಗದೇ ಇದ್ದಲ್ಲಿ ಅಥವಾ ಅದೇ ಹದಿನೈದು ದಿನಗಳೊಳಗೆ ಕೆಲಸಕ್ಕೆ ಹಾಜರಾಗಲು ತನಗೆ ಇಷ್ಟವಿಲ್ಲವೆಂಬ ಮಾಹಿತಿ ಇರುವ ನಿಮ್ಮ ಮನವಿಯನ್ನು ಇದಕ್ಕೆ ಲಗತ್ತಿಸಿರುವ ಮುಚ್ಚಳಿಕೆ ನಮೂನೆಯಲ್ಲಿ 20/– ರೂ. ಛಾಪಾ ಕಾಗದಲ್ಲಿ ಬರೆದು ಜಿಲ್ಲಾ ನೋಂದಣಾಧಿಕಾರಿಗಳು, ಉಡುಪಿ ಇವರಿಗೆ ಕಳುಹಿಸದೇ ಇದ್ದಲ್ಲಿ ನಿಮ್ಮ ಈ ನೇಮಕಾತಿಯನ್ನು ನಿಯಮಾನುಸಾರ ನಿಮಗೆ ಯಾವುದೇ ನೋಟೀಸ್ ನೀಡದೇ ರದ್ದುಪಡಿಸಲಾಗುವುದು ( Cancel ಮಾಡಲಾಗುವುದು) ಇದಕ್ಕೆ ನೀವು ಬದ್ದರಾಗಿರತಕ್ಕದ್ದು.

**ನೇಮಕಾತಿ ಪ್ರಾಧಿಕಾರಿ ಹಾಗೂ**
**ಜಿಲ್ಲಾ ನೋಂದಣಾಧಿಕಾರಿಗಳು,**
**ಉಡುಪಿ ಜಿಲ್ಲೆ, ಉಡುಪಿ.**

ಪಿ.ಆರ್. 50

## ಕಂದಾಯ ಇಲಾಖೆ

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಮಂಡ್ಯ ಜಿಲ್ಲೆ, ಮಂಡ್ಯ.

**ಸಂ:ಸಿಬ್ಬಂದಿ(1)ಸಿಆರ್:205/2010–11 ದಿನಾಂಕ:05–03–2012.**

### ಅಧಿಕೃತ ಜ್ಞಾಪನ

**ವಿಷಯ:–** ಮಂಡ್ಯ ಜಿಲ್ಲಾ ಕಂದಾಯ ಘಟಕದಲ್ಲಿ ಗ್ರಾಮ ಲೆಕ್ಕಿಗರ ಖಾಲಿ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಆಯ್ಕೆಗೊಂಡ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ಬಗ್ಗೆ.

**ಉಲ್ಲೇಖ:–** ಸರ್ಕಾರದ ಅಧಿಸೂಚನೆ ಸಂ:ಆರ್‌ಡಿ 299ಬಿಎಸ್‌ಸಿ 2006 ದಿನಾಂಕ:3–2–2009

2) ಸರ್ಕಾರದ ಅಧಿಸೂಚನೆ ಸಂ.ಕಂ.ಇ 299 ಬಿಎಸ್‌ಸಿ 2006 ದಿನಾಂಕ:24–7–2009 ಮತ್ತು 8–9–2009.

3) ಸರ್ಕಾರದ ಪತ್ರ ಸಂ.ಕಂ.ಇ 04 ಬಿಎಸ್‌ಸಿ 2011. ದಿನಾಂಕ 25–02–2011.

4) ಈ ಕಾರ್ಯಾಲಯದ ಸಮಸಂಖ್ಯೆಯ ಅಧಿಸೂಚನೆ ದಿನಾಂಕ:20–04–2011.

5) ಈ ಕಾರ್ಯಾಲಯದ ಸಮಸಂಖ್ಯೆಯ ಅಂತಿಮ ಆಯ್ಕೆ ಪಟ್ಟಿ ಪ್ರಕಟಣಾ ದಿನಾಂಕ: 22–09–2011.

6) ಈ ಕಾರ್ಯಾಲಯದ ಸಮಸಂಖ್ಯೆಯ ಅಧಿಕೃತ ಜ್ಞಾಪನ ಪತ್ರ ದಿನಾಂಕ:28–01–2012.

ಸರ್ಕಾರದ ಉಲ್ಲೇಖ (1)ಮತ್ತು (2)ರ ಅಧಿಸೂಚನೆಯನ್ವಯ ಮಂಡ್ಯ ಜಿಲ್ಲಾ ಕಂದಾಯ ಘಟಕದಲ್ಲಿ ಖಾಲಿ ಇರುವ ಗ್ರಾಮ ಲೆಕ್ಕಿಗರ ಹುದ್ದೆಗಳನ್ನು **1977ರ ಗ್ರಾಮಲೆಕ್ಕಿಗರ ವೃಂದ ಮತ್ತು ನೇಮಕಾತಿ ನಿಯಮಗಳ ತಿದ್ದುಪಡಿ ದಿನಾಂಕ:24–7–2009ರನ್ವಯ** ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಸರ್ಕಾರವು ಉಲ್ಲೇಖ (3) ರ ಪತ್ರದಲ್ಲಿ ಅನುಮೋದನೆ ನೀಡಿದೆ.

ಕರ್ನಾಟಕ ನಾಗರೀಕ ಸೇವೆ ( Revenue subordinate branch)(cadre and recruitment)(amendment) ನಿಯಮಗಳು, 2009 ರಲ್ಲಿ ನಿಗಧಿಪಡಿಸಿರುವ ವಿದ್ಯಾರ್ಹತೆ ಅನ್ವಯ ಮಂಡ್ಯ ಜಿಲ್ಲಾ ಕಂದಾಯ ಘಟಕದಲ್ಲಿ ಖಾಲಿ ಇರುವ 59 ಗ್ರಾಮ ಲೆಕ್ಕಿಗರ ಹುದ್ದೆಗಳನ್ನು ಭರ್ತಿಗೊಳಿಸಲು ಉಲ್ಲೇಖ(4)ರ ಅಧಿಸೂಚನೆಯ ಮೂಲಕ, ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದ್ದು, ದಿನಾಂಕ:23–05–2011ರವರೆಗೆ ಸ್ವೀಕೃತಿಯಾದ ಅರ್ಜಿಗಳನ್ನು ಅರ್ಹತೆ ಮತ್ತು ಮೀಸಲಾತಿ ಅನ್ವಯ ವಿಂಗಡಿಸಿ ಅರ್ಹ ಅಭ್ಯರ್ಥಿಗಳ ತಾತ್ಕಾಲಿಕ ಪರಿಶೀಲನಾ ಪಟ್ಟಿಯನ್ನು ದಿನಾಂಕ:08–08–2011 ರಂದು ಪ್ರಕಟಿಸಿ ಆಕ್ಷೇಪಣೆ/ತಕರಾರು ಇದ್ದಲ್ಲಿ ಆಕ್ಷೇಪಣೆಗಳನ್ನು ದಿನಾಂಕ: 22–08–2011ರವರೆಗೆ ಸಲ್ಲಿಸಲು ತಿಳಿಸಲಾಗಿತ್ತು.

ಅರ್ಹ ಅಭ್ಯರ್ಥಿಗಳ ಮೂಲ ದಾಖಲೆಗಳನ್ನು ಕ್ರಮವಾಗಿ ದಿನಾಂಕ:06–09–2011 ಮತ್ತು ದಿನಾಂಕ:07–09–2011 ರಂದು ಪರಿಶೀಲಿಸಿ, ಅಂತಿಮ ಆಯ್ಕೆ ಪಟ್ಟಿಯನ್ನು ದಿನಾಂಕ: 22–09–2011 ರಂದು ಪ್ರಕಟಿಸಲಾಗಿದೆ.

ಅಂತಿಮವಾಗಿ ಆಯ್ಕೆಯಾದ ಅಭ್ಯರ್ಥಿಗಳು ಈಗಾಗಲೇ ನೀಡಿರುವ ಮೀಸಲಾತಿ ಸಿಂಧುತ್ವ ಪ್ರಮಾಣ ಪತ್ರ ಹಾಗೂ ಗುಣ ನಡತೆ ಪ್ರಮಾಣ ಪತ್ರಗಳನ್ನು ಸಂಬಂದಪಟ್ಟ ಪೋಲೀಸ್ ಹಾಗೂ ಜಿಲ್ಲಾಧಿಕಾರಿಗಳು ಪರಿಶೀಲನೆ ಮಾಡಿ ನೀಡಿರುವ ದೃಢೀಕರಣ ಪತ್ರಗಳನ್ನು ಅನುಸರಿಸಿ,ಈ ಕೆಳಕಂಡ ಅಭ್ಯರ್ಥಿಗಳನ್ನು **ಗ್ರಾಮ ಲೆಕ್ಕಿಗರ ಹುದ್ದೆಗೆ ರೂ 5800–100–6000–125–6500–150–7100–175–7800–200–8600–225–9500–250–10500 ರ ವೇತನ ಶ್ರೇಣಿಯಲ್ಲಿ** ಅವರ ಹೆಸರಿನ ಎದುರು ನಮೂದಿಸಲ್ಪಟ್ಟ ಗ್ರಾಮಲೆಕ್ಕಿಗ ವೃತ್ತ ಮತ್ತು ಭೂಮಿ ಕೇಂದ್ರಕ್ಕೆ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ನೇಮಕಾತಿ ಮಾಡಿ ಆದೇಶ ಹೊರಡಿಸಿದೆ.

| ಕ್ರ.ಸಂ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಕರ್ತವ್ಯ ನಿರ್ವಹಿಸಬೇಕಾದ ಕಛೇರಿ /ವೃತ್ತ | ಯಾವ ಕಛೇರಿಯಲ್ಲಿ ಹಾಜರಾಗಬೇಕು. |
|---|---|---|---|
| | **ಸಾಮಾನ್ಯವರ್ಗ** | | |
| 1. | ಸುನೀಲ್‌ಕುಮಾರ್.ಎಂ. ಬಿನ್ ಮರೀಗೌಡ,ಕೆರೆ ಸ್ಟ್ರೀಟ್, ದೊಡ್ಡಿಂದುವಾಡಿ, ಗ್ರಾಮ ಕೊಳ್ಳೇಗಾಲ ತಾಲ್ಲೂಕು ಚಾಮರಾಜನಗರ–ಜಿಲ್ಲೆ 571440. | ಜಿ.ಬೊಮ್ಮೇನಹಳ್ಳಿ ವೃತ್ತ, ಬಿಂಡಿಗನವಿಲೆ ಹೋಬಳಿ, ನಾಗಮಂಗಲ ತಾಲ್ಲೂಕು. | ತಹಸೀಲ್ದಾರ್, ನಾಗಮಂಗಲ. |
| 2. | ಶ್ರೀನಿವಾಸ ಬಿನ್ ಗೋವಿಂದಪ್ಪ, ಪೇಟೆಮಾಚಗೌಡ್ನಹಳ್ಳಿ ಗ್ರಾಮ & ಪೋಸ್ಟ್, ಅರಕಲಗೂಡು, ತಾಲ್ಲೂಕು ಹಾಸನ–573 102. | ಬಿ.ಮಲ್ಲೇನಹಳ್ಳಿ ವೃತ್ತ, ಬೆಳ್ಳೂರು ಹೋಬಳಿ ನಾಗಮಂಗಲ ತಾಲ್ಲೂಕು. | ತಹಸೀಲ್ದಾರ್, ನಾಗಮಂಗಲ. |
| 3. | ಪ್ರಮೋದ್.ಟಿ.ಎಂ. ಬಿನ್ ಚನ್ನವೀರಸ್ವಾಮಿ.ಟಿ.ಎಂ., ನಾಗತ್ತಬಸಾಪುರ ಗ್ರಾಮ & ಪೋಸ್ಟ್, ಹೂವಿನಹಡಗಲಿ ತಾಲ್ಲೂಕು, ಬಳ್ಳಾರಿ–583 219. | ವಳಗೆರೆಹಳ್ಳಿ ವೃತ್ತ, ಕಸಬಾ ಹೋಬಳಿ 1ನೇ ವೃತ್ತ, ಮದ್ದೂರು ತಾಲ್ಲೂಕು. | ತಹಸೀಲ್ದಾರ್, ಮದ್ದೂರು. |
| 4. | ತ್ರಿವೇಣಿ.ಕೆ. ಬಿನ್ ಕೋದಂಡರಾಮಯ್ಯ C/o ನರಸಿಂಹಯ್ಯ, ಪರಪ್ಪಸ್ವಾಮಿ ಮಠದ ಎದುರು, ಹೊಸಪಾಳ್ಯ, ಹಳೆಪಾಳ್ಯ ಪೋಸ್ಟ್, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ–572 202 | ಹುಳುಗನಹಳ್ಳಿ ವೃತ್ತ, ಕಸಬಾ ಹೋಬಳಿ 1ನೇ ವೃತ್ತ, ಮದ್ದೂರು ತಾಲ್ಲೂಕು | ತಹಸೀಲ್ದಾರ್, ಮದ್ದೂರು. |
| 5. | ನಾಗರಾಜ.ಟಿ.ಕೆ. ಬಿನ್ ಕಲ್ಲೇನಿಂಗಪ್ಪ, ತಂಡಗ ಗ್ರಾಮ & ಪೋಸ್ಟ್, ಹೊಸದುರ್ಗ ತಾಲ್ಲೂಕು ಚಿತ್ರದುರ್ಗ ಜಿಲ್ಲೆ–577 597. | ಅಂಕನಹಳ್ಳಿ ವೃತ್ತ, ಬೆಳ್ಳೂರು ಹೋಬಳಿ ನಾಗಮಂಗಲ ತಾಲ್ಲೂಕು | ತಹಸೀಲ್ದಾರ್, ನಾಗಮಂಗಲ. |
| 6. | ಇಮ್ರಾನ್ ಬಿನ್ ಟಿಪುಸಾಬ್, ಬಾಷಾ ನಗರ, ರಿಂಗ್ ರೋಡ್, ರಜಾ–ಉಲ್ಲಾ–ಮುಸ್ತಾಫ ನಗರ, ರಾಘವೇಂದ್ರ ಸ್ಕೂಲ್‌ನ ಬಲಭಾಗ, ದಾವಣಗೆರೆ ಜಿಲ್ಲೆ–577 001. | ಗುಂಡೇನಹಳ್ಳಿ ವೃತ್ತ, ಬಿಂಡಿಗನವಿಲೆ ಹೋಬಳಿ, ನಾಗಮಂಗಲ ತಾಲ್ಲೂಕು | ತಹಸೀಲ್ದಾರ್, ನಾಗಮಂಗಲ. |
| 7. | ಶಿವಕುಮಾರ ಮಾಳ್ಗೀರ ಬಿನ್ ಹನುಮಂತಪ್ಪ.ಎಂ., ಮುತ್ತಿಗಿ ಗ್ರಾಮ ನೀಚಾಪುರ ಪೋಸ್ಟ್, ಹರಪನಹಳ್ಳಿ ತಾಲ್ಲೂಕು ದಾವಣಗೆರೆ ಜಿಲ್ಲೆ–583 127 | ಅರಕೆರೆ ವೃತ್ತ, ದೇವಲಾಪುರ ಹೋಬಳಿ, ನಾಗಮಂಗಲ ತಾಲ್ಲೂಕು | ತಹಸೀಲ್ದಾರ್, ನಾಗಮಂಗಲ. |

| ಕ್ರ.ಸಂ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಕರ್ತವ್ಯ ನಿರ್ವಹಿಸಬೇಕಾದ ಕಛೇರಿ /ವೃತ್ತ | ಯಾವ ಕಛೇರಿಯಲ್ಲಿ ಹಾಜರಾಗಬೇಕು. |
|---|---|---|---|
| 8. | ಅರ್ಚನ ರೀನಾ ಬಿನ್ ಚಿನ್ನಪ್ಪ, ಎಂ.ದಾಸಪುರ, ಅಂಕನಹಳ್ಳಿ ಪೋಸ್ಟ್, ಚೆನ್ನರಾಯಪಟ್ಟಣ, ಹಾಸನ ಜಿಲ್ಲೆ–573 131 | ಎ.ನಾಗತಿಹಳ್ಳಿ ವೃತ್ತ ಬಿಂಡಿಗನವಿಲೆ ಹೋಬಳಿ, ನಾಗಮಂಗಲ ತಾಲ್ಲೂಕು. | ತಹಸೀಲ್ದಾರ್, ನಾಗಮಂಗಲ |
| 9. | ರಘು.ಆರ್. ಬಿನ್ ರಾಜಪ್ಪ.ಡಿ.ಜಿ., ರಾಮಗಿರಿ, ಹೊಳಲ್ಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ–577 539 | ಬಿಳಿಗುಂದ ವೃತ್ತ, ಬೆಳ್ಳೂರು ಹೋಬಳಿ, ನಾಗಮಂಗಲ ತಾಲ್ಲೂಕು. | ತಹಸೀಲ್ದಾರ್, ನಾಗಮಂಗಲ |
| | **ಪರಿಶಿಷ್ಠ ಜಾತಿ** | | |
| 10 | ಶ್ರೀಧರ.ಎಂ.ಎನ್. ಬಿನ್ ನಾಗರಾಜ.ಸಿ. ಮಂದೇನಕೊಪ್ಪ ಮತ್ತೂರು ಪೋಸ್ಟ್, ಶಿವಮೊಗ್ಗ ತಾಲ್ಲೂಕು, ಶಿವಮೊಗ್ಗ ಜಿಲ್ಲೆ –577 201. | ನಗುವನಹಳ್ಳಿ ವೃತ್ತ, ಕಸಬಾ ಹೋಬಳಿ, ಶ್ರೀರಂಗಪಟ್ಟಣ ತಾಲ್ಲೂಕು. | ತಹಸೀಲ್ದಾರ್, ಶ್ರೀರಂಗಪಟ್ಟಣ |
| 11 | ಲಂಕೇಶ್.ಹೆಚ್.ಎಸ್. ಬಿನ್ ಶ್ರೀನಿವಾಸಯ್ಯ, ಕುಂಬಾರಕೊಪ್ಪಲು ಗ್ರಾಮ, ಕೃಷ್ಣಾಪುರ ಪೋಸ್ಟ್, ಕೆ.ಆರ್.ನಗರ ತಾಲ್ಲೂಕು, ಮೈಸೂರು ಜಿಲ್ಲೆ–571 602. | ದೊಡ್ಡಗಾಡಿಗನಹಳ್ಳಿ ವೃತ್ತ, ಬೂಕನಕೆರೆ ಹೋಬಳಿ, ಕೆ.ಆರ್.ಪೇಟೆ ತಾಲ್ಲೂಕು. | ತಹಸೀಲ್ದಾರ್, ಕೆ.ಆರ್.ಪೇಟೆ. |
| 12 | ಲಕ್ಷ್ಮೀದೇವಿ ಬಿನ್ ಗೆಂಡಗಿದಾಸಯ್ಯ, ಹಲಸಹಳ್ಳಿ, ಧನಗೂರು ಪೋಸ್ಟ್, ಮಳವಳ್ಳಿ ತಾಲ್ಲೂಕು, ಮಂಡ್ಯ–571430 | ಭೂಮಿ ಕೇಂದ್ರ ತಾಲ್ಲೂಕು ಕಛೇರಿ, ಮದ್ದೂರು ತಾಲ್ಲೂಕು. | ತಹಸೀಲ್ದಾರ್, ಮದ್ದೂರು. |
| | **ಪರಿಶಿಷ್ಠ ವರ್ಗ** | | |
| 13 | ಪಿಂಕಿ.ಎಸ್. ಬಿನ್ ಸಿದ್ಧನಾಯಕ, ನಂ.433, ಕೆನ್ನಾಳು ಗ್ರಾಮ & ಅಂಚೆ ಪಾಂಡವಪುರ ತಾಲ್ಲೂಕು, ಮಂಡ್ಯ ಜಿಲ್ಲೆ–571 439 | ಭೂಮಿ ಕೇಂದ್ರ ತಾಲ್ಲೂಕು ಕಛೇರಿ, ಪಾಂಡವಪುರ ತಾಲ್ಲೂಕು. | ತಹಸೀಲ್ದಾರ್, ಪಾಂಡವಪುರ. |
| 14 | ಗಣೇಶ.ಎಸ್. ಬಿನ್ ಸಿದ್ದಪ್ಪ (ಜೋಗಪ್ಪರ) ತಾಳೀಕಟ್ಟೆ ಗ್ರಾಮ & ಪೋಸ್ಟ್, ಹೊಳಲ್ಕೆರೆ ತಾಲ್ಲೂಕು, ಚಿತ್ರದುರ್ಗಜಿಲ್ಲೆ–577 539 | ಚಾಮಲಾಪುರ ವೃತ್ತ, ಬೆಳ್ಳೂರು ಹೋಬಳಿ, ನಾಗಮಂಗಲ ತಾಲ್ಲೂಕು. | ತಹಸೀಲ್ದಾರ್, ನಾಗಮಂಗಲ |
| | **ಪ್ರವರ್ಗ–2ಎ** | | |
| 15 | ಯಲ್ಲಪ್ಪ ಮೇಲಪ್ಪ ವಾಘೆ ಬಿನ್ ಮೆಲ್ಲಪ್ಪ @ಚಾಂದಕವಟೆ ಗ್ರಾಮ & ಅಂಚೆ, ಸಿಂಧಗಿ ತಾಲ್ಲೂಕು ಬಿಜಾಪುರ ಜಿಲ್ಲೆ–586 143. | ಕೊಪ್ಪ ವೃತ್ತ, ಕೊಪ್ಪ ಹೋಬಳಿ 2ನೇ ವೃತ್ತ, ಮದ್ದೂರು ತಾಲ್ಲೂಕು. | ತಹಸೀಲ್ದಾರ್, ಮದ್ದೂರು. |

| ಕ್ರ.ಸಂ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಕರ್ತವ್ಯ ನಿರ್ವಹಿಸಬೇಕಾದ ಕಛೇರಿ /ವೃತ್ತ | ಯಾವ ಕಛೇರಿಯಲ್ಲಿ ಹಾಜರಾಗಬೇಕು. |
|---|---|---|---|
| 16 | ಸಿದ್ದಪ್ಪ.ಹೆಚ್. ಬಿನ್ ಹನುಮಂತಪ್ಪ.<br>ತಾಳಿಕಟ್ಟೆ ಗ್ರಾಮ & ಪೋಸ್ಟ್,<br>ರಾಮಗಿರಿ ಹೋಬಳಿ,ಹೊಳಲ್ಕೆರೆ ತಾಲ್ಲೂಕು,<br>ಚಿತ್ರದುರ್ಗ ಜಿಲ್ಲೆ –577 539. | ಎಲೆಕೊಪ್ಪ ವೃತ್ತ,<br>ಬಿಂಡಿಗನವಿಲೆ ಹೋಬಳಿ,<br>ನಾಗಮಂಗಲ ತಾಲ್ಲೂಕು. | ತಹಸೀಲ್ದಾರ್,<br>ನಾಗಮಂಗಲ. |
| | **ವರ್ಗ–2ಬಿ** | | |
| 17 | ಸತ್ತಾರ್ ಬಿನ್ ಮಹಬೂಬ್<br>@ ಸೋನಾಳ ಗ್ರಾಮ ಮತ್ತು ಪೋಸ್ಟ್<br>ಔರದ ತಾಲ್ಲೂಕು,ಬೀದರ್‌ಜಿಲ್ಲೆ–585 417. | ಬೆಳತೂರು ವೃತ್ತ,<br>ಕೊಪ್ಪ ಹೋಬಳಿ 3ನೇ ವೃತ್ತ,<br>ಮದ್ದೂರು ತಾಲ್ಲೂಕು. | ತಹಸೀಲ್ದಾರ್,<br>ಮದ್ದೂರು. |
| | **ವರ್ಗ–3ಎ** | | |
| 18 | ಪ್ರದೀಪ್ ಕುಮಾರ್.ವೈ. ಬಿನ್ ಬರಮಪ್ಪ,<br>ಲಿಂಗನಾಯ್ಕನಹಳ್ಳಿ ಗ್ರಾಮ ಕುರವಟ್ಟಿ ಅಂಚೆ<br>ಹೂವಿನಡಗಲಿ ತಾಲ್ಲೂಕು ಬಳ್ಳಾರಿ ಜಿಲ್ಲೆ–583 217 | ಮುಳಕಟ್ಟೆ ವೃತ್ತ,<br>ಕಸಬಾ ಹೋಬಳಿ,<br>ನಾಗಮಂಗಲ ತಾಲ್ಲೂಕು. | ತಹಸೀಲ್ದಾರ್,<br>ನಾಗಮಂಗಲ. |
| | **ವರ್ಗ–3ಬಿ** | | |
| 19 | ಪ್ರಿಯ.ಪಿ. ಬಿನ್ ವಿರೂಪಾಕ್ಷಪ್ಪ,<br>ದಾಸಿಕಟ್ಟೆ, ರಾಮಗಿರಿ ಪೋಸ್ಟ್, ಹುಲ್ಲಾಳ್‌ಕೆರೆ ತಾಲ್ಲೂಕು,<br>ಚಿತ್ರದುರ್ಗಜಿಲ್ಲೆ–577 539. | ಮೈಲಾರ ಪಟ್ಟಣ ವೃತ್ತ,<br>ಕಸಬಾ ಹೋಬಳಿ,<br>ನಾಗಮಂಗಲ ತಾಲ್ಲೂಕು. | ತಹಸೀಲ್ದಾರ್,<br>ನಾಗಮಂಗಲ. |
| | **ವರ್ಗ–1** | | |
| 20 | ಅಜ್ಜೋಳ ನಾಗರಾಜ ಬಿನ್ ಸಿದ್ದಪ್ಪ.ಎ.<br>ಬಿ.ಓಬಳಪುರ, ನೀಚಾಪುರ ಪೋಸ್ಟ್,<br>ಹರಪ್ಪನಹಳ್ಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ–583 127 | ದೊಡ್ಡಬಾಲ ವೃತ್ತ,<br>ಬಿಂಡಿಗನವಿಲೆ ಹೋಬಳಿ,<br>ನಾಗಮಂಗಲ ತಾಲ್ಲೂಕು. | ತಹಸೀಲ್ದಾರ್,<br>ನಾಗಮಂಗಲ. |

ಎಲ್ಲಾ ಅಭ್ಯರ್ಥಿಗಳು ಸಾರ್ವಜನಿಕ ಸೇವೆಗೆ ಕಂಕಣಬದ್ದವಾಗಿ ನಿಷ್ಠೆ, ಪ್ರಾಮಾಣಿಕತೆ ಹಾಗೂ ನಿಷ್ಪಕ್ಷಪಾತವಾಗಿ ಕರ್ತವ್ಯ ನಿರ್ವಹಿಸಲು ಸೂಚಿಸಿದೆ.

**ಷರತ್ತುಗಳು**

1) ಮೇಲ್ಕಂಡ ಅಭ್ಯರ್ಥಿಗಳು ಈ ಆದೇಶ ದಿನಾಂಕದಿಂದ 15 ದಿನಗಳೊಳಗಾಗಿ ಸಂಬಂಧಿಸಿದ ತಹಸೀಲ್ದಾರ್‌ರವರ ಸಮಕ್ಷಮದಲ್ಲಿ ಕರ್ತವ್ಯಕ್ಕೆ ಹಾಜರಾಗುವುದು. ಈ ನೇಮಕವನ್ನು ಒಂದು ವೇಳೆ ತಿರಸ್ಕರಿಸಿದ್ದಲ್ಲಿ 7 ದಿನಗಳೊಳಗಾಗಿ ಲಿಖಿತ ರೂಪದಲ್ಲಿ ತಿಳಿಸತಕ್ಕದ್ದು.

2) ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗುವ ವೇಳೆಯಲ್ಲಿ ಈ ಕೆಳಕಂಡ ಮೂಲ ಪ್ರಮಾಣ ಪತ್ರಗಳನ್ನು ಪರಿಶೀಲನೆಗಾಗಿ ಹಾಜರು ಪಡಿಸಬೇಕು 1) ಪಿ.ಯು.ಸಿ. ಅಂಕಪಟ್ಟಿ 2) ಎಸ್‌ಎಸ್‌ಎಲ್‌ಸಿ ಅಂಕಪಟ್ಟಿ/ಹುಟ್ಟಿದ ದಿನಾಂಕದ ದೃಢೀಕರಣ 3) ನಡತೆ ಪ್ರಮಾಣ ಪತ್ರ 4) ವೈದ್ಯಕೀಯ ಪ್ರಮಾಣ ಪತ್ರ 5) ಸಕ್ಷಮ ಪ್ರಾಧಿಕಾರದಿಂದ ನೀಡಲ್ಪಟ್ಟ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿಯಡಿ ಆಯ್ಕೆಯಾದ ಅಭ್ಯರ್ಥಿಗಳು ಮಾತ್ರ).

3) ಅಭ್ಯರ್ಥಿಯು ತನ್ನ ವಾಸಸ್ಥಳ ಕ್ಷೇತ್ರಕ್ಕೆ ಸಂಬಂಧಿಸಿದ ಕನಿಷ್ಠ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ ನಡತೆ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಕರ್ತವ್ಯಕ್ಕೆ ಹಾಜರಾಗುವ ವೇಳೆಯಲ್ಲಿ ಹಾಜರು ಪಡಿಸತಕ್ಕದ್ದು .

4) ಅಭ್ಯರ್ಥಿಗಳು ಕೆಲಸಕ್ಕೆ ಹಾಜರಾದ ದಿನಾಂಕದಿಂದ 2 ವರ್ಷಗಳ ಅವಧಿಗೆ ಪರಿವೀಕ್ಷಣಾ ಅವಧಿಯಲ್ಲಿದ್ದು (ಪ್ರೋಬೇಷನರಿ) ಅವರು ಈ ಅವಧಿಯಲ್ಲಿ ಕೆಳಗೆ ನಮೂದಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗತಕ್ಕದ್ದು 1) ಅಕೌಂಟ್ಸ್ ಲೋಯರ್ 2) ರೆವಿನ್ಯೂ ಲೋಯರ್ 3) ಕನ್ನಡ ಭಾಷಾ ಪರೀಕ್ಷೆ (ಎಸ್‌ಎಸ್‌ಎಲ್‌ಸಿ ಯಲ್ಲಿ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ತೆಗೆದುಕೊಳ್ಳದಿದ್ದಲ್ಲಿ ಕನ್ನಡ ಭಾಷಾ ಪರೀಕ್ಷೆಯನ್ನು ಪಾಸು ಮಾಡತಕ್ಕದ್ದು) ಈ ಅವಧಿಯಲ್ಲಿ ನಿಗಧಿತ ಇಲಾಖಾ ಪರೀಕ್ಷೆಗಳನ್ನು ತೇರ್ಗಡೆಯಾಗದಿದ್ದಲ್ಲಿ ಅಥವಾ ಸೇವೆ ತೃಪ್ತಿಕರವಾಗಿರದಿದ್ದಲ್ಲಿ ಅವರನ್ನು ಸೇವೆಯಿಂದ ತೆಗೆದು ಹಾಕಲಾಗುವುದು.

5) ಈ ನೇಮಕಾತಿಯ ಸಂಪೂರ್ಣ ತಾತ್ಕಾಲಿಕವಾಗಿದ್ದು, ಸರ್ಕಾರವು ಇಚ್ಛಿಸಿದಲ್ಲಿ ಅಥವಾ ಹುದ್ದೆಗಳು ರದ್ದಾದಲ್ಲಿ ಅಥವಾ ಸುಳ್ಳು ಮಾಹಿತಿ ನೀಡಿ ಉದ್ಯೋಗ ಪಡೆದಿರುವುದು ಕಂಡು ಬಂದಲ್ಲಿ ಅವರನ್ನು ಯಾವುದೇ ಸಮಯದಲ್ಲಿ ಯಾವುದೇ ಮುನ್ಸೂಚನೆ ಇಲ್ಲದೇ ಸೇವೆಯಿಂದ ತೆಗೆದು ಹಾಕಲಾಗುವುದು.

6) ಅಭ್ಯರ್ಥಿಗಳು ಸೇವೆಗೆ ಹಾಜರಾಗುವ ಸಂದರ್ಭದಲ್ಲಿ ಭಾರತದ ಸಂವಿಧಾನಾತ್ಮಕವಾಗಿ ಗೊತ್ತುಪಡಿಸಿದ ನಮೂನೆಯಲ್ಲಿ "ಪ್ರಮಾಣ ವಚನ" ಸ್ವೀಕಾರ ಮಾಡತಕ್ಕದ್ದು.

7) ಅಭ್ಯರ್ಥಿಗಳು ಸರ್ಕಾರದ ಆದೇಶ ಸಂ: ಎಫ್‌ಡಿ (ಎನ್‌ಪಿಎಲ್) 04 ಪಿಇಟಿ 2005 ದಿನಾಂಕ: 31–3–2006ರಲ್ಲಿ ಜಾರಿಗೆ ನೀಡಿದ ಹೊಸ ನಿವೃತ್ತಿ ವೇತನ ನೀತಿಗೆ ಒಳಪಟ್ಟಿರುತ್ತಾರೆ.

8) ಸರ್ಕಾರದ ಸುತ್ತೋಲೆ ಸಂ:ಕಂ.ಇ 54 ಬಿಎಸ್‌ಸಿ 2007 ದಿನಾಂಕ: 27–3–2007 ರನ್ವಯ ಅಂತರ ಜಿಲ್ಲಾ ವರ್ಗಾವಣೆಗೆ ಜಿಲ್ಲೆಯಲ್ಲಿ ಕನಿಷ್ಠ 5 ವರ್ಷಗಳ ಸೇವೆಯನ್ನು ಕಡ್ಡಾಯವಾಗಿ ಪೂರೈಸತಕ್ಕದ್ದು.

9) ಅಭ್ಯರ್ಥಿಗಳು ಉದ್ಯೋಗ ವಿನಿಮಯ ಕೇಂದ್ರದಲ್ಲಿ ನೊಂದಾಯಿಸಿದ ಗುರುತಿನ ಚೀಟಿಯನ್ನು ತಹಸೀಲ್ದಾರ್‌ರಲ್ಲಿ ಹಾಜರುಪಡಿಸತಕ್ಕದ್ದು, ತಹಸೀಲ್ದಾರ್‌ರು ಅದನ್ನು ಉದ್ಯೋಗ ವಿನಿಮಯ ಕೇಂದ್ರಕ್ಕೆ ಸರೆಂಡರ್ ಮಾಡುವುದು.

10) ಅಭ್ಯರ್ಥಿಗಳು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958: ಕರ್ನಾಟಕ ನಾಗರೀಕ ಸೇವಾ(ಸಿಸಿಎ) ನಿಯಮಾವಳಿ 1957/ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966 ಹಾಗೂ ಕಾಲಕಾಲಕ್ಕೆ ಸರ್ಕಾರದಿಂದ ಹೊರಡಿಸಲಾಗುವ ಇತರೆ ನಿಯಮಾವಳಿಗಳಿಗೆ ಬದ್ದರಾಗಿರುತ್ತಾರೆ.

11) ಇದು ನೇರನೇಮಕಾತಿ ಹುದ್ದೆ ಆದ ಕಾರಣ ಅಭ್ಯರ್ಥಿಯು ಸೇವೆಗೆ ಸೇರಿದ ದಿನಾಂಕದಿಂದ ಜೇಷ್ಠತೆಯನ್ನು ಪರಿಗಣಿಸಲಾಗುವುದು.

12) ಗ್ರಾಮ ಲೆಕ್ಕಿಗ ಹುದ್ದೆಗೆ ನೇಮಕಾತಿ ಹೊಂದಿರುವುದರಿಂದ, ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವಾಗ ರೂ 1000/– (ರೂಪಾಯಿ ಒಂದು ಸಾವಿರ ಮಾತ್ರ) ಭದ್ರತಾ ಠೇವಣೆಯನ್ನು ನಗದು ರೂಪದಲ್ಲಾಗಲೀ ಅಥವಾ ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕವಾಗಲೀ ತೊಡಗಿಸಿ,ಮುಚ್ಚಳಿಕೆ ಪತ್ರವನ್ನು ಛಾಪಾ ಕಾಗದದಲ್ಲಿ ಬರೆಯಿಸಿ ಒಬ್ಬರ ಜಾಮೀನು ಕೊಡತಕ್ಕದ್ದು. ತಹಸೀಲ್ದಾರ್‌ರು ಸದರಿ ರಾಷ್ಟ್ರೀಯ ಉಳಿತಾಯ ಪತ್ರವನ್ನು ಸರ್ಕಾರಕ್ಕೆ ಪ್ಲೆಡ್ಜ್ ಮಾಡಿಕೊಳ್ಳತಕ್ಕದ್ದು.

13) ಅಭ್ಯರ್ಥಿಯು ಇಲಾಖೆಯಿಂದ ಕಾಲಕಾಲಕ್ಕೆ ನಿಗಧಿಪಡಿಸಿದ ಹಾಗೂ ನಿಗಧಿಪಡಿಸಲಾಗುವ ವಿವಿಧ ಪರೀಕ್ಷೆ/ ತರಭೇತಿಗಳನ್ನು ಯಶಸ್ವಿಯಾಗಿ ಮುಗಿಸತಕ್ಕದ್ದು.

14) ಈಗಾಗಲೇ ಸರ್ಕಾರಿ ಸೇವೆಯಲ್ಲಿರುವ ಹಾಗೂ ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳು ನಿಯಮಾವಳಿಗಳನ್ನು ಉಲ್ಲಂಘಿಸಿ ಅರ್ಜಿ ಸಲ್ಲಿಸಿರುವುದಿಲ್ಲವೆಂಬ ಬಗ್ಗೆ ಪ್ರಮಾಣ ಪತ್ರ ಸಲ್ಲಿಸತಕ್ಕದ್ದು ಹಾಗೂ ಮೇಲೆ ಸೂಚಿಸಿದ ಕಾರ್ಯಸ್ಥಳಗಳಲ್ಲಿ ವರದಿ ಮಾಡಿಕೊಳ್ಳುವ ಮೊದಲು ಮುಂಚಿನ ಸೇವೆಯಿಂದ ಬಿಡುಗಡೆ ಆದೇಶ ಪಡೆದಿರಬೇಕು.

15) ಅಭ್ಯರ್ಥಿಗೆ ಕೆಲಸಕ್ಕೆ ಹಾಜರಾಗುವ ಸಂದರ್ಭದಲ್ಲಿ ಪ್ರಯಾಣ ಭತ್ಯೆ ಅಥವಾ ಇತರೆ ಯಾವುದೇ ಭತ್ಯೆಯನ್ನು ನೀಡಲಾಗುವುದಿಲ್ಲ.

16) ಆಯ್ಕೆಯಾಗಿರುವ ಅಭ್ಯರ್ಥಿಗಳು ಅವರನ್ನು ನೇಮಿಸಿರುವ ಸ್ಥಳದಲ್ಲಿ ಕಡ್ಡಾಯವಾಗಿ ವಾಸ ಮಾಡಗಬೇಕು. ಈ ಬಗ್ಗೆ ಒಂದು ಪ್ರಮಾಣ ಪತ್ರವನ್ನು (ನಮೂನೆಯಂತೆ) ನೋಟರಿಯವರಿಂದ ಪ್ರಮಾಣೀಕರಿಸಿ ಹಾಜರುಪಡಿಸಬೇಕು.

17) ತಾಲ್ಲೂಕು ಕಛೇರಿಯ ಭೂಮಿ ಕೇಂದ್ರಕ್ಕೆ ನೇಮಕಾತಿ ಹೊಂದಿರುವ ಅಭ್ಯರ್ಥಿಗಳು ಗ್ರಾಮಲೆಕ್ಕಿಗರ ಹುದ್ದೆಯಿಂದ ಪದೋನ್ನತಿ ಹೊಂದುವ ವರೆಗೂ ತಾಲ್ಲೂಕುಗಳ ಭೂಮಿ ಕೇಂದ್ರದಲ್ಲಿಯೇ ಕಾರ್ಯನಿರ್ವಹಿಸಬೇಕಾಗಿದ್ದು ಯಾವುದೇ ಕಾರಣಕ್ಕೂ ವೃತ್ತಕ್ಕೆ ವರ್ಗಾವಣೆ ಹೊಂದಲು ಅವಕಾಶವಿರುವುದಿಲ್ಲ.

18) ನೇಮಕಾತಿಗೊಳಿಸಲಾದ ಸ್ಥಳ/ ಕಛೇರಿಯನ್ನು ಯಾವುದೇ ಕಾರಣಕ್ಕೂ ಬದಲಾವಣೆ ಮಾಡಲಾಗುವುದಿಲ್ಲ. ಸ್ಥಳ ಬದಲಾವಣೆ ಮಾಡುವಂತೆ ಒತ್ತಡ ತಂದಲ್ಲಿ ಅಂತಹ: ಅಭ್ಯರ್ಥಿಗಳ ನೇಮಕಾತಿ ಆದೇಶವನ್ನು ರದ್ದುಗೊಳಿಸಲಾಗುತ್ತದೆ.

19) ಗ್ರಾಮ ಲೆಕ್ಕಿಗರ ಆಯ್ಕೆ ಮತ್ತು ನೇರನೇಮಕಾತಿ ಪ್ರಾಧಿಕಾರಿಯವರಾದ ಜಿಲ್ಲಾಧಿಕಾರಿ, ಮಂಡ್ಯ ಜಿಲ್ಲೆ, ಮಂಡ್ಯರವರು ಸದರಿ ಆದೇಶವನ್ನು ಮಾರ್ಪಡಿಸುವ ಹಾಗೂ ರದ್ದು ಪಡಿಸುವ ಸಂಪೂರ್ಣ ಅಧಿಕಾರವನ್ನು ಹೊಂದಿರುತ್ತಾರೆ.

**ಡಾ:ಪಿ.ಸಿ.ಜಾಫರ್,ಭಾ.ಆ.ಸೇ**

ಅಧ್ಯಕ್ಷರು,

ಗ್ರಾಮ ಲೆಕ್ಕಿಗರ ನೇರ ನೇಮಕಾತಿ ಆಯ್ಕೆ ಪ್ರಾಧಿಕಾರ

ಮತ್ತು ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.

**ಪಿ.ಆರ್. 53**

## ಕಂದಾಯ ಇಲಾಖೆ

### ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳ ಕಾರ್ಯಾಲಯ, ಹಾಸನ ಜಿಲ್ಲೆ, ಹಾಸನ

**ನಂ.ಗ್ರಾ.ಲೆ.ಸಿಬ್ಬಂದಿ–106/2010–11. ದಿನಾಂಕ: 01–03–2012**

### ಅಧಿಕೃತ ಜ್ಞಾಪನ

**ವಿಷಯ:–** ಹಾಸನ ಜಿಲ್ಲಾ ಕಂದಾಯ ಘಟಕದಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಆಯ್ಕೆ ಆದ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ಕುರಿತು.

**ಉಲ್ಲೇಖ:–** 1) ಸರ್ಕಾರದ ಅಧಿಸೂಚನೆ ಸಂ ಕಂಇ 299 ಬಿಎಸ್‌ಸಿ 2006 ದಿನಾಂಕ: 3/2/2009 ಮತ್ತು ದಿನಾಂಕ: 24/7/2009.

2) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ, ಬೆಂಗಳೂರು ರವರ ಪತ್ರದ ಸಂಖ್ಯೆ:ಕಂ.ಇ.04 ಬಿ.ಎಸ್.ಸಿ. 2011 ದಿನಾಂಕ: 25/02/2011.

3) ಈ ಕಚೇರಿಯ ಸಮ ಸಂಖ್ಯೆ ಅಧಿಸೂಚನೆ ದಿನಾಂಕ: 13/05/2011.

4) ಈ ಕಾರ್ಯಾಲಯದ ಆಯ್ಕೆ ಪಟ್ಟಿ ದಿನಾಂಕ: 24–09–2011.

ಹಾಸನ ಜಿಲ್ಲೆಯ ಕಂದಾಯ ಇಲಾಖೆಯಲ್ಲಿ ಖಾಲಿ ಇರುವ 42 ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರನೇಮಕಾತಿ ಮೂಲಕ ಭರ್ತಿಮಾಡುವ ಸಲುವಾಗಿ ಕರ್ನಾಟಕ ಸಾಮಾನ್ಯ ಸೇವೆಗಳು (ರೆವೆನ್ಯೂ ಸಬಾರ್ಡಿನೇಟ್ ಬ್ರಾಂಚ್, ಕೇಡರ್ ಅಂಡ್ ರಿಕ್ರೂಟ್‌ಮೆಂಟ್) ನಿಯಮಗಳನ್ವಯ ಉಲ್ಲೇಖ(1) ಮತ್ತು (2) ರಲ್ಲಿನ ಸರ್ಕಾರದ ಅಧಿಸೂಚನೆಯಂತೆ ಉಲ್ಲೇಖ(3) ರ ಈ ಕಾರ್ಯಾಲಯದ ಅಧಿಸೂಚನೆಯನ್ವಯ, ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. ಅದರಂತೆ ಅಭ್ಯರ್ಥಿಗಳಿಂದ ಸ್ವೀಕೃತವಾದ ಅರ್ಜಿಗಳನ್ನಾಧರಿಸಿ, ಅರ್ಹತೆ ಮತ್ತು ಮೀಸಲಾತಿಯನ್ವಯ ವಿಂಗಡಿಸಿ 1:10 ರ

ಅನುಪಾತದಲ್ಲಿ ಅರ್ಹ ಅಭ್ಯರ್ಥಿಗಳ ಪರಿಶೀಲನಾ ಪಟ್ಟಿಯನ್ನು ತಯಾರಿಸಿ ಪ್ರಕಟಿಸಲಾಗಿರುತ್ತದೆ. ಈ ಪರಿಶೀಲನಾ ಪಟ್ಟಿಯ ಬಗ್ಗೆ ಆಕ್ಷೇಪಣೆ/ತಕರಾರು ಅರ್ಜಿಗಳನ್ನು ಸಲ್ಲಿಸಲು ಕಾಲಾವಕಾಶ ನೀಡಲಾಗಿತ್ತು.

ಪರಿಶೀಲನಾ ಪಟ್ಟಿಯಲ್ಲಿ ಲಭ್ಯವಾದ ಅರ್ಹ ಅಭ್ಯರ್ಥಿಗಳ ಮೂಲ ದಾಖಲೆಗಳನ್ನು ಪರಿಶೀಲಿಸಿ ಆಯ್ಕೆ ಪಟ್ಟಿಯನ್ನು ಉಲ್ಲೇಖ (4) ರಂತೆ ಪ್ರಕಟಿಸಲಾಗಿದೆ.

ಆಯ್ಕೆ ಪಟ್ಟಿಯಲ್ಲಿರುವ ಅಭ್ಯರ್ಥಿಗಳಿಗೆ ದಿನಾಂಕ: 17–10–2011 ರಂದು ಸಮಾಲೋಚನಾ ಸಭೆ ನಡೆಸಿ ಖಾಲಿ ಹುದ್ದೆಗಳ ಮಾಹಿತಿಯನ್ನು ನೀಡಿ ಅಭ್ಯರ್ಥಿಗಳು ಆಪೇಕ್ಷೆ ಪಟ್ಟಂತಹ ಕಾರ್ಯ ಸ್ಥಳವನ್ನು ಆಯ್ಕೆ ಮಾಡಿಕೊಳ್ಳಲು ಅವಕಾಶ ನೀಡಲಾಗಿದೆ.

ಆಯ್ಕೆಯಾಗಿರುವ ಅಭ್ಯರ್ಥಿಗಳ ಮೆರಿಟ್ ಮತ್ತು ವರ್ಗವಾರು ಆಧಾರದ ಮೇಲೆ, ಈ ಕೆಳಕಂಡ ಅಭ್ಯರ್ಥಿಯನ್ನು ಗ್ರಾಮಲೆಕ್ಕಿಗರ ಹುದ್ದೆಯ ವೇತನ ಶ್ರೇಣಿಯ 5800–100–6000–125–6500–150–7100–175–7800–200–8600–225–9500–250–10500 ರಲ್ಲಿ ನೇಮಕಾತಿ ಮಾಡಿ ಆದೇಶಿಸಿರುತ್ತದೆ.

| **ಅಭ್ಯರ್ಥಿಯ ಹೆಸರು** | **ತಂದೆಯ ಹೆಸರು** | **ವಿಳಾಸ** | **ನೇಮಕಾತಿ ಮಾಡಿರುವ ವೃತ್ತದ ಹೆಸರು** |
|---|---|---|---|
| ದರಸಮಹಮ್ಮದ್ ಮುಲ್ಲಾ | ಖಾದಿರ್‌ಬಾಷ್ ಮುಲ್ಲಾ | ಅಸ್ಕಿ ಅಂಚೆ, ಸಿಂದಗಿ ತಾಲ್ಲೂಕು, ಬಿಜಾಪುರ–586118. | ಬೇಲೂರು ತಾಲ್ಲೂಕು, ತುಂಬದೇವನಹಳ್ಳಿ ವೃತ್ತ. |

**ಷರತ್ತುಗಳು:**

1. ಅಭ್ಯರ್ಥಿಯು ಈ ಆದೇಶ ತಲುಪಿದ 15 ದಿನಗಳೊಳಗೆ ಮೂಲ ದಾಖಲಾತಿಗಳೊಂದಿಗೆ ಸಂಬಂಧಿಸಿದ ತಹಶೀಲ್ದಾರರ ಸಮಕ್ಷಮದಲ್ಲಿ ವರದಿ ಮಾಡಿಕೊಳ್ಳುವುದು. ತಪ್ಪಿದಲ್ಲಿ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) 1977ರ ನಿಯಮ 18ರನ್ವಯ ನೇಮಕಾತಿಯನ್ನು ರದ್ದುಪಡಿಸಲಾಗುತ್ತದೆ.
2. ಅಭ್ಯರ್ಥಿಯು ವಾಸಿಸುತ್ತಿರುವ ಕ್ಷೇತ್ರಕ್ಕೆ ಸಂಬಂಧಿಸಿದ ಇಬ್ಬರು ಗಣ್ಯ ವ್ಯಕ್ತಿಗಳಿಂದ ನೀಡಲ್ಪಟ್ಟ ನಡತೆ ಪ್ರಮಾಣ ಪತ್ರಗಳನ್ನು ಹಾಜರುಪಡಿಸುವುದು.
3. ಈ ನೇಮಕಾತಿಯು ಅಭ್ಯರ್ಥಿಯು ಹಾಜರುಪಡಿಸಿರುವ ಪಿ.ಯು.ಸಿ. ಅಂಕ ಪಟ್ಟಿಯ ಸತ್ಯಾಪನೆಗೆ ಒಳಪಟ್ಟಿರುತ್ತದೆ.
4. ಅಭ್ಯರ್ಥಿಯು ಸಲ್ಲಿಸುವ ಮೂಲ ದಾಖಲಾತಿಗಳಲ್ಲಿ ತಪ್ಪು ಮಾಹಿತಿ ಅಥವಾ ಸುಳ್ಳು ಎಂದು ಕಂಡು ಬಂದಲ್ಲಿ ಅಂತಹವರ ಆಯ್ಕೆಯನ್ನು ರದ್ದುಪಡಿಸಲಾಗುತ್ತದೆ.
5. ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾದ 2 ವರ್ಷಗಳ ಅವಧಿಯು ಪರಿವೀಕ್ಷಣೆ ಅವಧಿ (Probation Period) ಯಾಗಿರುತ್ತದೆ. ಈ ಅವಧಿಯಲ್ಲಿ (1) ಅಕೌಂಟ್ಸ್ ಲೋಯರ್ 2) ರೆವಿನ್ಯೂ ಲೋಯರ್ ಮತ್ತು ಕನ್ನಡ ಭಾಷಾ ಪರೀಕ್ಷೆ (SSLC ಯಲ್ಲಿ ಕನ್ನಡವನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ತೆಗೆದುಕೊಳ್ಳದಿದ್ದಲ್ಲಿ) ಗಳಲ್ಲಿ ಉತ್ತೀರ್ಣರಾಗುವುದು. ತಪ್ಪಿದಲ್ಲಿ ಹಾಗೂ ಕೆಲಸ ಕಾರ್ಯಗಳು ತೃಪ್ತಿಕರವಾಗಿರದಿದ್ದಲ್ಲಿ ಸೇವೆಯಿಂದ ತೆಗೆದು ಹಾಕಲಾಗುವುದು.
6. ಅಭ್ಯರ್ಥಿಯು ಸೇವೆಗೆ ಹಾಜರಾಗಿ ಭಾರತ ಸಂವಿಧಾನದ ರೀತ್ಯಾ "ನಿಷ್ಠೆಯ ಪ್ರಮಾಣ ವಚನ ಸ್ವೀಕರಿಸುವುದು."
7. ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಸರ್ಕಾರಿ ವೈದ್ಯರಿಂದ ಪಡೆದ ವೈದ್ಯಕೀಯ ಅರ್ಹತಾ ಪ್ರಮಾಣ ಪತ್ರವನ್ನು ಹಾಜರುಪಡಿಸುವುದು.
8. ಅಭ್ಯರ್ಥಿಯು ಸರ್ಕಾರದ ಆದೇಶ ನಂ. FD/SPL/04/PET/05 ದಿನಾಂಕ 31/03/2006 ರಂತೆ ಹೊಸ ನಿವೃತ್ತಿ ವೇತನ ಯೋಜನೆಗೆ ಒಳಪಟ್ಟಿರುತ್ತಾರೆ.

9. ಸರ್ಕಾರದ ಸುತ್ತೋಲೆ ಸಂ.ಕಂ.ಇ/54/ಬಿಎಸ್‌ಸಿ/2007, ದಿನಾಂಕ: 27/3/2007 ರನ್ವಯ ಅಂತರ ಜಿಲ್ಲಾ ವರ್ಗಾವಣೆಗೆ ಹಾಸನ ಜಿಲ್ಲೆಯಲ್ಲಿ ಕನಿಷ್ಠ 5 ವರ್ಷಗಳ ಸೇವೆಯನ್ನು ಕಡ್ಡಾಯವಾಗಿ ಪೂರೈಸತಕ್ಕದ್ದು.

10. ಅಭ್ಯರ್ಥಿಗಳು, ಕರ್ನಾಟಕ ನಾಗರೀಕ ಸೇವೆ (ನಡತೆ) ನಿಯಮಗಳು 1966 ಹಾಗೂ ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಗಳು 1957 ಹಾಗೂ ಕಾಲಕಾಲಕ್ಕೆ ಸರ್ಕಾರದಿಂದ ಹೊರಡಿಸಲಾಗುವ ಇತರೆ ನಿಯಮಾವಳಿಗಳಿಗೆ ಬದ್ಧರಾಗಿರುತ್ತಾರೆ.

11. ಅಭ್ಯರ್ಥಿಯು ರೂ. 1000/– ಭದ್ರತಾ ಠೇವಣಿಯನ್ನು ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕ ಸಂಬಂಧಪಟ್ಟ ತಹಶೀಲ್ದಾರರಲ್ಲಿ ಹಾಜರುಪಡಿಸುವುದು ಹಾಗೂ ತಹಶೀಲ್ದಾರರು ಈ ಮೊತ್ತಕ್ಕೆ ಭದ್ರತಾ ಮುಚ್ಚಳಿಕೆ ಪತ್ರವನ್ನು ಪಡೆದು ಸರ್ಕಾರಕ್ಕೆ ಆಧಾರ ಮಾಡಿಕೊಳ್ಳುವುದು.

12. ಅಭ್ಯರ್ಥಿಯ ಜೇಷ್ಠತೆಯು ನೇಮಕಾತಿ ಪ್ರಾಧಿಕಾರದ ಉಲ್ಲೇಖ (4) ರಲ್ಲಿನ ಆಯ್ಕೆ ಪಟ್ಟಿಯಲ್ಲಿ ಪ್ರಸ್ತುತ ಇದ್ದಂತೆಯೇ ಇರತಕ್ಕದ್ದು ಹಾಗೂ ತದನಂತರ ಈ ಸಂಬಂಧ ಸರ್ಕಾರ ಹೊರಡಿಸುವ ಕಾನೂನು ತಿದ್ದುಪಡಿಗಳಿಗೆ ಒಳಪಟ್ಟಿರುತ್ತದೆ.

**ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು,**
**ಗ್ರಾಮಲೆಕ್ಕಿಗರ ನೇಮಕಾತಿ ಸಮಿತಿ**
**ಹಾಸನ ಜಿಲ್ಲೆ, ಹಾಸನ.**

**ಕಂದಾಯ ಇಲಾಖೆ**

**ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳ ಕಾರ್ಯಾಲಯ, ಹಾಸನ ಜಿಲ್ಲೆ, ಹಾಸನ**

**ನಂ.ಗ್ರಾ.ಲೆ.ಸಿಬ್ಬಂದಿ–106/2010–11. ದಿನಾಂಕ: 01–03–2012**

**ಅಧಿಕೃತ ಜ್ಞಾಪನ**

**ವಿಷಯ:–** ಹಾಸನ ಜಿಲ್ಲಾ ಕಂದಾಯ ಘಟಕದಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಆಯ್ಕೆ ಆದ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ಕುರಿತು.

**ಉಲ್ಲೇಖ:–** 1) ಸರ್ಕಾರದ ಅಧಿಸೂಚನೆ ಸಂ ಕಂಇ 299 ಬಿಎಸ್‌ಸಿ 2006 ದಿನಾಂಕ: 3/2/2009 ಮತ್ತು ದಿನಾಂಕ: 24/7/2009.

2) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ, ಬೆಂಗಳೂರು ರವರ ಪತ್ರದ ಸಂಖ್ಯೆ.ಕಂ.ಇ.04 ಬಿ.ಎಸ್.ಸಿ. 2011 ದಿನಾಂಕ: 25/02/2011.

3) ಈ ಕಚೇರಿಯ ಸಮ ಸಂಖ್ಯೆ ಅಧಿಸೂಚನೆ ದಿನಾಂಕ: 13/05/2011.

4) ಈ ಕಾರ್ಯಾಲಯದ ಆಯ್ಕೆ ಪಟ್ಟಿ ದಿನಾಂಕ: 24–09–2011.

ಹಾಸನ ಜಿಲ್ಲೆಯ ಕಂದಾಯ ಇಲಾಖೆಯಲ್ಲಿ ಖಾಲಿ ಇರುವ 42 ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರನೇಮಕಾತಿ ಮೂಲಕ ಭರ್ತಿಮಾಡುವ ಸಲುವಾಗಿ ಕರ್ನಾಟಕ ಸಾಮಾನ್ಯ ಸೇವೆಗಳು (ರೆವೆನ್ಯೂ ಸಬಾರ್ಡಿನೇಟ್ ಬ್ರಾಂಚ್, ಕೇಡರ್ ಅಂಡ್ ರಿಕ್ರೂಟ್‌ಮೆಂಟ್) ನಿಯಮಗಳನ್ವಯ ಉಲ್ಲೇಖ(1) ಮತ್ತು (2) ರಲ್ಲಿನ ಸರ್ಕಾರದ ಅಧಿಸೂಚನೆಯಂತೆ ಉಲ್ಲೇಖ(3) ರ ಈ ಕಾರ್ಯಾಲಯದ ಅಧಿಸೂಚನೆಯನ್ವಯ, ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. ಅದರಂತೆ ಅಭ್ಯರ್ಥಿಗಳಿಂದ ಸ್ವೀಕೃತವಾದ ಅರ್ಜಿಗಳನ್ನಾಧರಿಸಿ, ಅರ್ಹತೆ ಮತ್ತು ಮೀಸಲಾತಿಯನ್ವಯ ವಿಂಗಡಿಸಿ 1:10 ರ ಅನುಪಾತದಲ್ಲಿ ಅರ್ಹ ಅಭ್ಯರ್ಥಿಗಳ ಪರಿಶೀಲನಾ ಪಟ್ಟಿಯನ್ನು ತಯಾರಿಸಿ ಪ್ರಕಟಿಸಲಾಗಿರುತ್ತದೆ. ಈ ಪರಿಶೀಲನಾ ಪಟ್ಟಿಯ ಬಗ್ಗೆ ಆಕ್ಷೇಪಣೆ/ತಕರಾರು ಅರ್ಜಿಗಳನ್ನು ಸಲ್ಲಿಸಲು ಕಾಲಾವಕಾಶ ನೀಡಲಾಗಿತ್ತು.

ಪರಿಶೀಲನಾ ಪಟ್ಟಿಯಲ್ಲಿ ಲಭ್ಯವಾದ ಅರ್ಹ ಅಭ್ಯರ್ಥಿಗಳ ಮೂಲ ದಾಖಲೆಗಳನ್ನು ಪರಿಶೀಲಿಸಿ ಆಯ್ಕೆ ಪಟ್ಟಿಯನ್ನು ಉಲ್ಲೇಖ (4) ರಂತೆ ಪ್ರಕಟಿಸಲಾಗಿದೆ.

ಆಯ್ಕೆ ಪಟ್ಟಿಯಲ್ಲಿರುವ ಅಭ್ಯರ್ಥಿಗಳಿಗೆ ದಿನಾಂಕ: 17-10-2011 ರಂದು ಸಮಾಲೋಚನಾ ಸಭೆ ನಡೆಸಿ ಖಾಲಿ ಹುದ್ದೆಗಳ ಮಾಹಿತಿಯನ್ನು ನೀಡಿ ಅಭ್ಯರ್ಥಿಗಳು ಆಪೇಕ್ಷೆ ಪಟ್ಟಂತಹ ಕಾರ್ಯ ಸ್ಥಳವನ್ನು ಆಯ್ಕೆ ಮಾಡಿಕೊಳ್ಳಲು ಅವಕಾಶ ನೀಡಲಾಗಿದೆ.

ಆಯ್ಕೆಯಾಗಿರುವ ಅಭ್ಯರ್ಥಿಗಳ ಮೆರಿಟ್ ಮತ್ತು ವರ್ಗವಾರು ಆಧಾರದ ಮೇಲೆ, ಈ ಕೆಳಕಂಡ ಅಭ್ಯರ್ಥಿಯನ್ನು ಗ್ರಾಮಲೆಕ್ಕಿಗರ ಹುದ್ದೆಯ ವೇತನ ಶ್ರೇಣಿಯ 5800-100-6000-125-6500-150-7100-175-7800-200-8600-225-9500-250-10500 ರಲ್ಲಿ ನೇಮಕಾತಿ ಮಾಡಿ ಆದೇಶಿಸಿರುತ್ತದೆ.

| **ಅಭ್ಯರ್ಥಿಯ ಹೆಸರು** | **ತಂದೆಯ ಹೆಸರು** | **ವಿಳಾಸ** | **ನೇಮಕಾತಿ ಮಾಡಿರುವ ವೃತ್ತದ ಹೆಸರು** |
|---|---|---|---|
| ರಾಧಾಮಣಿ.ಎಸ್. | ಶಿವಣ್ಣ | ಉಂಗ್ರ ಗ್ರಾಮ, ಮಾವಿನಹಳ್ಳಿ ಪೋಸ್ಟ್, ಸಿ.ಎಸ್.ಪುರ ಹೋಬಳಿ, ಗುಬ್ಬಿ ತಾಲ್ಲೂಕು, ತುಮಕೂರು-572213. | ಹಾಸನ ತಾಲ್ಲೂಕು, ಕಾರ್ಲೆ ವೃತ್ತ. |

**ಷರತ್ತುಗಳು:**

1. ಅಭ್ಯರ್ಥಿಯು ಈ ಆದೇಶ ತಲುಪಿದ 15 ದಿನಗಳೊಳಗೆ ಮೂಲ ದಾಖಲಾತಿಗಳೊಂದಿಗೆ ಸಂಬಂಧಿಸಿದ ತಹಶೀಲ್ದಾರರ ಸಮಕ್ಷಮದಲ್ಲಿ ವರದಿ ಮಾಡಿಕೊಳ್ಳುವುದು. ತಪ್ಪಿದಲ್ಲಿ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) 1977ರ ನಿಯಮ 18ರನ್ವಯ ನೇಮಕಾತಿಯನ್ನು ರದ್ದುಪಡಿಸಲಾಗುತ್ತದೆ.
2. ಅಭ್ಯರ್ಥಿಯು ವಾಸಿಸುತ್ತಿರುವ ಕ್ಷೇತ್ರಕ್ಕೆ ಸಂಬಂಧಿಸಿದ ಇಬ್ಬರು ಗಣ್ಯ ವ್ಯಕ್ತಿಗಳಿಂದ ನೀಡಲ್ಪಟ್ಟ ನಡತೆ ಪ್ರಮಾಣ ಪತ್ರಗಳನ್ನು ಹಾಜರುಪಡಿಸುವುದು.
3. ಈ ನೇಮಕಾತಿಯು ಅಭ್ಯರ್ಥಿಯು ಹಾಜರುಪಡಿಸಿರುವ ಪಿ.ಯು.ಸಿ. ಅಂಕ ಪಟ್ಟಿಯ ಸತ್ಯಾಪನೆಗೆ ಒಳಪಟ್ಟಿರುತ್ತದೆ.
4. ಅಭ್ಯರ್ಥಿಯು ಸಲ್ಲಿಸುವ ಮೂಲ ದಾಖಲಾತಿಗಳಲ್ಲಿ ತಪ್ಪು ಮಾಹಿತಿ ಅಥವಾ ಸುಳ್ಳು ಎಂದು ಕಂಡು ಬಂದಲ್ಲಿ ಅಂತಹವರ ಆಯ್ಕೆಯನ್ನು ರದ್ದುಪಡಿಸಲಾಗುತ್ತದೆ.
5. ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾದ 2 ವರ್ಷಗಳ ಅವಧಿಯು ಪರಿವೀಕ್ಷಣೆ ಅವಧಿ (Probation Period) ಯಾಗಿರುತ್ತದೆ. ಈ ಅವಧಿಯಲ್ಲಿ (1) ಅಕೌಂಟ್ಸ್ ಲೋಯರ್ 2) ರೆವಿನ್ಯೂ ಲೋಯರ್ ಮತ್ತು ಕನ್ನಡ ಭಾಷಾ ಪರೀಕ್ಷೆ (SSLC ಯಲ್ಲಿ ಕನ್ನಡವನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ತೆಗೆದುಕೊಳ್ಳದಿದ್ದಲ್ಲಿ) ಗಳಲ್ಲಿ ಉತ್ತೀರ್ಣರಾಗುವುದು. ತಪ್ಪಿದಲ್ಲಿ ಹಾಗೂ ಕೆಲಸ ಕಾರ್ಯಗಳು ತೃಪ್ತಿಕರವಾಗಿರದಿದ್ದಲ್ಲಿ ಸೇವೆಯಿಂದ ತೆಗೆದು ಹಾಕಲಾಗುವುದು.
6. ಅಭ್ಯರ್ಥಿಯು ಸೇವೆಗೆ ಹಾಜರಾಗಿ ಭಾರತ ಸಂವಿಧಾನದ ರೀತ್ಯಾ "ನಿಷ್ಠೆಯ ಪ್ರಮಾಣ ವಚನ ಸ್ವೀಕರಿಸುವುದು."
7. ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಸರ್ಕಾರಿ ವೈದ್ಯರಿಂದ ಪಡೆದ ವೈದ್ಯಕೀಯ ಅರ್ಹತಾ ಪ್ರಮಾಣ ಪತ್ರವನ್ನು ಹಾಜರುಪಡಿಸುವುದು.
8. ಅಭ್ಯರ್ಥಿಯು ಸರ್ಕಾರದ ಆದೇಶ ನಂ. FD/SPL/04/PET/05 ದಿನಾಂಕ 31/03/2006 ರಂತೆ ಹೊಸ ನಿವೃತ್ತಿ ವೇತನ ಯೋಜನೆಗೆ ಒಳಪಟ್ಟಿರುತ್ತಾರೆ.
9. ಸರ್ಕಾರದ ಸುತ್ತೋಲೆ ಸಂ.ಕಂ.ಇ/54/ಬಿಎಸ್‌ಸಿ/2007, ದಿನಾಂಕ: 27/3/2007 ರನ್ವಯ ಅಂತರ ಜಿಲ್ಲಾ ವರ್ಗಾವಣೆಗೆ ಹಾಸನ ಜಿಲ್ಲೆಯಲ್ಲಿ ಕನಿಷ್ಠ 5 ವರ್ಷಗಳ ಸೇವೆಯನ್ನು ಕಡ್ಡಾಯವಾಗಿ ಪೂರೈಸತಕ್ಕದ್ದು.
10. ಅಭ್ಯರ್ಥಿಗಳು, ಕರ್ನಾಟಕ ನಾಗರೀಕ ಸೇವೆ (ನಡತೆ) ನಿಯಮಗಳು 1966 ಹಾಗೂ ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಗಳು 1957 ಹಾಗೂ ಕಾಲಕಾಲಕ್ಕೆ ಸರ್ಕಾರದಿಂದ ಹೊರಡಿಸಲಾಗುವ ಇತರೆ ನಿಯಮಾವಳಿಗಳಿಗೆ ಬದ್ಧರಾಗಿರುತ್ತಾರೆ.

11. ಅಭ್ಯರ್ಥಿಯು ರೂ. 1000/– ಭದ್ರತಾ ಠೇವಣಿಯನ್ನು ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕ ಸಂಬಂಧಪಟ್ಟ ತಹಶೀಲ್ದಾರರಲ್ಲಿ ಹಾಜರುಪಡಿಸುವುದು ಹಾಗೂ ತಹಶೀಲ್ದಾರರು ಈ ಮೊತ್ತಕ್ಕೆ ಭದ್ರತಾ ಮುಚ್ಚಳಿಕೆ ಪತ್ರವನ್ನು ಪಡೆದು ಸರ್ಕಾರಕ್ಕೆ ಆಧಾರ ಮಾಡಿಕೊಳ್ಳುವುದು.

12. ಅಭ್ಯರ್ಥಿಯ ಜೇಷ್ಠತೆಯು ನೇಮಕಾತಿ ಪ್ರಾಧಿಕಾರದ ಉಲ್ಲೇಖ (4) ರಲ್ಲಿನ ಆಯ್ಕೆ ಪಟ್ಟಿಯಲ್ಲಿ ಪ್ರಸ್ತುತ ಇದ್ದಂತೆಯೇ ಇರತಕ್ಕದ್ದು ಹಾಗೂ ತದನಂತರ ಈ ಸಂಬಂಧ ಸರ್ಕಾರ ಹೊರಡಿಸುವ ಕಾನೂನು ತಿದ್ದುಪಡಿಗಳಿಗೆ ಒಳಪಟ್ಟಿರುತ್ತದೆ.

**ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು,**
**ಗ್ರಾಮಲೆಕ್ಕಿಗರ ನೇಮಕಾತಿ ಸಮಿತಿ**
**ಹಾಸನ ಜಿಲ್ಲೆ, ಹಾಸನ.**

**ಪಿ.ಆರ್. 54**

**ನಮೂನೆ–1**

**(ನಿಯಮ–9)**

**ಗಣಿ ಮತ್ತು ಭೂವಿಜ್ಞಾನ ಇಲಾಖೆ,**

**ಅಧಿಸೂಚನೆ**

ಶ್ರೀ ಮಲ್ಲಿಕಾರ್ಜುನ. ಎಸ್. ಚಲವಾದಿ ಇವರು ದ್ವಿತೀಯ ದರ್ಜೆ ಸಹಾಯಕರಾಗಿ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಹಿರಿಯ ಭೂವಿಜ್ಞಾನಿ (ಅಂತರ್ಜಲ), ವಿಜಾಪುರ ಕಾರ್ಯಾಲಯದಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಇವರ ಹೆಸರನ್ನು **ಮಲ್ಲಿಕಾರ್ಜುನ.ಎಸ್. ಜಂಬಗಿ** ಎಂದು ಬದಲಾವಣೆಗೆ ಅನುಮತಿ ನೀಡಲಾಗಿದೆ.

**ನೇಮಕಾಧಿಕಾರಿಯವರ ಸಹಿ ಮತ್ತು ಪದನಾಮ**

**PD-C/N 34**

**ನಮೂನೆ–1**

**(ನಿಯಮ–9)**

**ನಿಯಂತ್ರಕರ ಕಚೇರಿ, ರಾಜ್ಯ ಲೆಕ್ಕಪತ್ರ ಇಲಾಖೆ, ಬೆಂಗಳೂರು**

**ಅಧಿಸೂಚನೆ**

ಶ್ರೀಮತಿ ಸಂಗಮ್ಮ ಹಾಲಸ್ವಾಮಿ ರುದ್ರಸ್ವಾಮಿ ಮಠ ದ್ವಿತೀಯ ದರ್ಜೆ ಸಹಾಯಕರು, ರಾಜ್ಯ ಲೆಕ್ಕಪತ್ರ ಇಲಾಖೆಯಲ್ಲಿ ಕಾರ್ಯಪಾಲಕ ಅಭಿಯಂತರರ ಕಛೇರಿ, ಬಾಗಲಕೋಟೆ ಪಟ್ಟಣಾಭಿವೃದ್ಧಿ ಪ್ರಾಧಿಕಾರ, ವಿಭಾಗ ನಂ1, ಬಾಗಲಕೋಟೆ ಕಾರ್ಯಾಲಯದಲ್ಲಿ ಕೆಲಸ ನಿರ್ವಹಿಸುತ್ತಿದ್ದು ಇವರ ಹೆಸರನ್ನು **ಶ್ರೀಮತಿ ರೇಖಾ ಹೆಚ್. ರುದ್ರಸ್ವಾಮಿ ಮಠ** ಬದಲಾವಣೆಗೆ ಅನುಮತಿ ನೀಡಲಾಗಿದೆ.

**ನೇಮಕಾಧಿಕಾರಿಯವರ ಸಹಿ ಮತ್ತು ಪದನಾಮ**

**PD-C/N 35**

**ಕರ್ನಾಟಕ ಲೋಕಸೇವಾ ಆಯೋಗ ಉದ್ಯೋಗ ಸೌಧ, ಬೆಂಗಳೂರು–560001**

**ಸಂಖ್ಯೆ: ಇ(2)8463/2011–12–/ಪಿಎಸ್‌ಸಿ, ದಿನಾಂಕ:15–02–2012**

**ತಿದ್ದುಪಡಿ**

**ಉಲ್ಲೇಖ:** 1) ಆಯೋಗದ ಅಧಿಸೂಚನೆ ಸಂಖ್ಯೆ: ಇ(3)1714/2010–11/ಪಿಎಸ್‌ಸಿ, ದಿನಾಂಕ:02–02–2011.

2) ಆಯೋಗದ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ಇ(3)14/2011–12/ಪಿಎಸ್‌ಸಿ, ದಿನಾಂಕ:25–04–2011.

3) ಆಯೋಗದ ಸೇರ್ಪಡೆ ಅಧಿಸೂಚನೆ ಸಂಖ್ಯೆ: ಇ(2)3166/2011–12/ಪಿಎಸ್‌ಸಿ, ದಿನಾಂಕ:21–09–2011.

4) ಆಯೋಗದ ಅಧಿಸೂಚನೆ ಸಂಖ್ಯೆ: ಇ(2)5879/2011–12/ಪಿಎಸ್‌ಸಿ, ದಿನಾಂಕ:30–11–2011.

5) ಆಯೋಗದ ಅಧಿಸೂಚನೆ ಸಂಖ್ಯೆ: ಇ(2)7123/2011–12/ಪಿಎಸ್‌ಸಿ, ದಿನಾಂಕ:27–12–2011.

ಉಲ್ಲೇಖ–1ರ ಅಧಿಸೂಚನೆಯಲ್ಲಿನ 2011ನೇ ಸಾಲಿನ ಸಹಾಯಕರು/ಪ್ರಥಮ ದರ್ಜೆ ಸಹಾಯಕರ ಹುದ್ದೆಗಳ ನೇಮಕಾತಿಗೆ ಸಂಬಂಧಿಸಿದಂತೆ ವಿವಿಧ ಮೀಸಲಾತಿಯಡಿ 1191 ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ಉಲ್ಲೇಖ–5ರ ಅಧಿಸೂಚನೆಯಲ್ಲಿ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸಿ, ಸಂಬಂಧಿತ ಇಲಾಖೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳ ಅರ್ಜಿ ಹಾಗೂ ಅಡಕಗಳೊಂದಿಗೆ ಇಲಾಖಾವಾರು ಪಟ್ಟಿಯನ್ನು ರವಾನಿಸಲಾಗಿತ್ತು. 2ಎ/ಮಾಜಿ ಸೈನಿಕ ಮೀಸಲಾತಿಯಡಿ ರಾಜ್ಯ ಲೆಕ್ಕ ಪತ್ರ ಇಲಾಖೆಗೆ ಹಂಚಿಕೆ ಮಾಡಲಾದ ಅಭ್ಯರ್ಥಿಯು 2ಎ ಪ್ರಮಾಣ ಪತ್ರದ ಬದಲಾಗಿ 3ಎ ಪ್ರಮಾಣ ಪತ್ರವನ್ನು ಹಾಜರುಪಡಿಸಿರುವುದರಿಂದ ಹಾಗೂ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿತ್ರದುರ್ಗ ಈ ಇಲಾಖೆಗೆ ತಪ್ಪಾಗಿ ಹಂಚಿಕೆ ಮಾಡಲಾಗಿರುವ 2ಬಿ/ಮಹಿಳೆ ಮೀಸಲಾತಿಯ ಅಭ್ಯರ್ಥಿಯ ಬದಲಿಗೆ 2ಎ/ಮಹಿಳೆ ಮೀಸಲಾತಿಯ ಅಭ್ಯರ್ಥಿಯನ್ನು ಮರು ಹಂಚಿಕೆ ಮಾಡುವ ಸಂಬಂಧ ರಾಜ್ಯ ಲೆಕ್ಕ ಪತ್ರ ಇಲಾಖೆ, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿತ್ರದುರ್ಗ ಮತ್ತು ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ತುಮಕೂರು ಈ ಇಲಾಖೆಗಳಿಗೆ ಆಗಿರುವ ಆಯ್ಕೆಗಳಲ್ಲಿ ಕೆಳಕಂಡಂತೆ ತಿದ್ದುಪಡಿ ಮಾಡಲಾಗಿದೆ.

| ಇಲಾಖೆ | ತಿದ್ದುಪಡಿ |
|---|---|
| 1) ರಾಜ್ಯ ಲೆಕ್ಕ ಪತ್ರ ಇಲಾಖೆ, | ಅಂತಿಮ ಆಯ್ಕೆ ಪಟ್ಟಿಯಲ್ಲಿ ಕ್ರಮ ಸಂಖ್ಯೆ: 220 ರಲ್ಲಿ 2ಎ/ಮಾಜಿ ಸೈನಿಕ ಮೀಸಲಾತಿಯಡಿ ಆಯ್ಕೆಯಾಗಿರುವ ಶ್ರೀ ಅಶ್ವತ್ಥನಾರಾಯಣ (ನೋಂ.ಸಂ.806805), ಇವರ ಆಯ್ಕೆಯನ್ನು ರದ್ದುಪಡಿಸಲಾಗಿದೆ. ಇವರ ಬದಲಾಗಿ 2ಎ/ಮಾಜಿ ಸೈನಿಕ ಮೀಸಲಾತಿಯಡಿ 141.00 ಅಂಕಗಳನ್ನು ಗಳಿಸಿರುವ ಶ್ರೀ ವಿಲಾಸ್ (ನೋಂ.ಸಂ.920968), ಜನ್ಮ ದಿನಾಂಕ:09–11–66 ಇವರನ್ನು ಆಯ್ಕೆಮಾಡಿ ಈ ಇಲಾಖೆಗೆ ನಿಯೋಜಿಸಲಾಗಿದೆ.<br>ಆಯ್ಕೆ ಪಟ್ಟಿಯಲ್ಲಿ ಇವರ ಜೇಷ್ಠತೆಯನ್ನು ಶ್ರೀ ರಿಯಾಜ್ ಮುಲ್ತಾನಿ (ನೋಂ.ಸಂ.767190) ಮತ್ತು ಶ್ರೀ ತಾನಾಜಿ ತಳವಾರ್ (ನೋಂ.ಸಂ.767924) ಇವರ ಮಧ್ಯದಲ್ಲಿ ಪರಿಗಣಿಸತಕ್ಕದ್ದು. |
| 2) ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿತ್ರದುರ್ಗ | ಅಂತಿಮ ಆಯ್ಕೆ ಪಟ್ಟಿಯಲ್ಲಿ ಕ್ರಮ ಸಂಖ್ಯೆ: 05ರಲ್ಲಿ 2ಬಿ/ಮಹಿಳೆ ಮೀಸಲಾತಿಯಡಿ ಆಯ್ಕೆಯಾಗಿರುವ ಶ್ರೀಮತಿ ಸುಮಯ್ಯ ಎನ್.ಆರ್. (ನೋಂ.ಸಂ.825990) ಜನ್ಮ ದಿನಾಂಕ:08–02–86, ಇವರ ಈ ಇಲಾಖೆ ಹಂಚಿಕೆಯನ್ನು ರದ್ದುಪಡಿಸಲಾಗಿದೆ. ಇವರ ಬದಲು 2ಎ/ಮಹಿಳೆ ಮೀಸಲಾತಿಯಡಿ 204.00 ಅಂಕ ಗಳಿಸಿರುವ ಶ್ರೀಮತಿ ರೇಣುಕಾ (ನೋಂ.ಸಂ.905570), ಜನ್ಮ ದಿನಾಂಕ:06–08–75 ಇವರನ್ನು ಆಯ್ಕೆಮಾಡಿ ಈ ಇಲಾಖೆಗೆ ನಿಯೋಜಿಸಲಾಗಿದೆ.<br>ಅಂತಿಮ ಆಯ್ಕೆ ಪಟ್ಟಿಯಲ್ಲಿ ಇವರ ಜೇಷ್ಠತೆಯನ್ನು ಕ್ರಮ ಸಂಖ್ಯೆ:05ರಲ್ಲಿ ಪರಿಗಣಿಸತಕ್ಕದ್ದು. |

| | |
|---|---|
| 3) ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ತುಮಕೂರು, | ಅಂತಿಮ ಆಯ್ಕೆ ಪಟ್ಟಿಯಲ್ಲಿ ಕ್ರಮ ಸಂಖ್ಯೆ: 20ರಲ್ಲಿ 2ಬಿ/ಮಹಿಳೆ ಮೀಸಲಾತಿಯಡಿ 198.00 ಅಂಕಗಳನ್ನು ಗಳಿಸಿ ಆಯ್ಕೆ ಯಾಗಿರುವ ಶ್ರೀಮತಿ ಫರಿದಾ .ಎಸ್. (ನೋಂ.ಸಂ.731836), ಜನ್ಮ ದಿನಾಂಕ:20–07–79 ಇವರ ಆಯ್ಕೆಯನ್ನು ರದ್ದುಪಡಿಸಲಾಗಿದೆ. ಶ್ರೀಮತಿ ಫರಿದಾ .ಎಸ್.ಇವರಿಂದ ತೆರವಾದ ಸ್ಥಾನದಲ್ಲಿ 2ಬಿ/ಮಹಿಳೆ ಮೀಸಲಾತಿಯಡಿ 199.50 ಅಂಕಗಳನ್ನು ಗಳಿಸಿರುವ ಶ್ರೀಮತಿ ಸುಮಯ್ಯ. ಎನ್.ಆರ್. (ನೋಂ.ಸಂ.825990), ಜನ್ಮ ದಿನಾಂಕ:08–02–86 ಇವರನ್ನು ಆಯ್ಕೆಮಾಡಿ ಈ ಇಲಾಖೆಗೆ ಮರು ನಿಯೋಜಿಸಲಾಗಿದೆ.<br>ಅಂತಿಮ ಆಯ್ಕೆ ಪಟ್ಟಿಯಲ್ಲಿ ಇವರ ಜೇಷ್ಠತೆಯನ್ನು ಕ್ರಮ ಸಂಖ್ಯೆ:20ರಲ್ಲಿ ಪರಿಗಣಿಸತಕ್ಕದ್ದು. |

**ವಿ.ಬಿ.ಪಾಟೀಲ್**
ಪಿ.ಆರ್. 55 ಕಾರ್ಯದರ್ಶಿ,
ಕರ್ನಾಟಕ ಲೋಕಸೇವಾ ಆಯೋಗ.

**ಕರ್ನಾಟಕ ಲೋಕಸೇವಾ ಆಯೋಗದ ಕಛೇರಿ, "ಉದ್ಯೋಗ ಸೌಧ", ಬೆಂಗಳೂರು,**

**ಸಂಖ್ಯೆ:ಆಡಳಿತ:2135/2011–12/ಪಿಎಸ್‌ಸಿ ದಿನಾಂಕ:12–03–2012.**

**ಅಧಿಸೂಚನೆ**

ಕರ್ನಾಟಕ ಲೋಕಸೇವಾ ಆಯೋಗದ ಕಛೇರಿಯಲ್ಲಿ ಪ್ರಸ್ತುತ ಖಾಲಿ ಇರುವ ಗ್ರೂಪ್ 'ಡಿ' ಸಮೂಹಕ್ಕೆ ಸೇರಿದ ಕೆಳಕಂಡ ಹುದ್ದೆಗಳ ನೇಮಕಾತಿಯನ್ನು 1977ರ ಕರ್ನಾಟಕ ಸಿವಿಲ್ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಾವಳಿಗಳ ನಿಯಮ 3ರನ್ವಯ ನಡೆಸಲು ಈ ಅಧಿಸೂಚನೆಯಲ್ಲಿ ತೋರಿಸಿರುವ ಅರ್ಜಿ ನಮೂನೆಯಲ್ಲಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ. ಭರ್ತಿ ಮಾಡಿದ ಅರ್ಜಿಗಳನ್ನು ₹5–00ರ ಅಂಚೆ ಆದೇಶ ಹಾಗೂ ಕೋರುವ ಮೀಸಲಾತಿ ಪ್ರಮಾಣ ಪತ್ರ ಮತ್ತು ಜನನ ಪ್ರಮಾಣ ಪತ್ರದ ಜೆರಾಕ್ಸ್ ಪ್ರತಿಗಳೊಂದಿಗೆ ಸಲ್ಲಿಸಲು ಕೊನೆಯ ದಿನಾಂಕ:13–04–2012 ಆಗಿರುತ್ತದೆ.

**ಹುದ್ದೆಗಳ ವಿವರ:–**

**1) ಹುದ್ದೆ ಹಾಗೂ ಸಂಖ್ಯೆ – ವಾಚ್ ಮನ್ 05, ಸ್ವೀಪರ್ 04, ಹೋಂ ಆರ್ಡಲೀ 11**

2) **ಹುದ್ದೆಗಳ ವರ್ಗೀಕರಣ** – ಪರಿಶಿಷ್ಟ ಜಾತಿ – 3 (ಇತರೆ–2, ಮಹಿಳೆ–1)
– ಪರಿಶಿಷ್ಟ ಪಂಗಡ – 1 (ಮಹಿಳೆ)
– ಪ್ರವರ್ಗ–1 – 1 (ಮಹಿಳೆ)
– ಪ್ರವರ್ಗ 2(ಎ) – 3 (ಇತರೆ–2, ಮಹಿಳೆ–1)
– ಪ್ರವರ್ಗ 2(ಬಿ) – 1 (ಮಹಿಳೆ)
– ಪ್ರವರ್ಗ 3(ಬಿ) – 1 (ಮಹಿಳೆ)
– ಸಾಮಾನ್ಯ ಅರ್ಹತೆ – 10 (ಇತರೆ–3, ಮಹಿಳೆ–3, ಮಾ.ಸೈ–2, ಯೋಜನಾ ನಿರಾಶ್ರಿತ –1, ಅಂಗವಿಕಲ–1 [ಕಡಿಮೆ ದೃಷ್ಟಿ ಹೊಂದಿರುವವರು (Low vision)]

3) **ವೇತನ ಶ್ರೇಣಿ: ₹4800–100–6000–125–6500–150–7100–175–7275**

4) **ಶೈಕ್ಷಣಿಕ ವಿದ್ಯಾರ್ಹತೆ:** ಇಲ್ಲ

5) **ಇನ್ನಿತರ ಷರತ್ತುಗಳು:–**

ಅ) ಭಾರತೀಯ ನಾಗರೀಕರಾಗಿರತಕ್ಕದ್ದು.

ಆ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಜೀವಂತ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

ಇ) ಅಭ್ಯರ್ಥಿಗಳು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

**6) ಪಿಂಚಣಿ ಸೌಲಭ್ಯ:–**

ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ (ಎಸ್‌ಪಿಎಲ್) 04 ಪಿಇಟಿ 2005, ದಿನಾಂಕ:31–03–2006ರಂತೆ

7) **ವಯೋಮಿತಿ:**

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

ಅ) ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

ಆ) ಗರಿಷ್ಠ ವಯೋಮಿತಿ:–

| | |
|---|---|
| ಸಾಮಾನ್ಯ ವರ್ಗ | 35 ವರ್ಷ |
| 2ಎ, 2ಬಿ, 3ಎ, 3ಬಿ | 38 ವರ್ಷ |
| ಪಜಾ/ಪಪಂ/ಪ್ರ–1 | 40 ವರ್ಷ |

1977ರ ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳ ನಿಯಮ 6ರಂತೆ ವಯೋಮಿತಿಯನ್ನು ಅದರಲ್ಲಿ ತಿಳಿಸಿರುವ ಮಟ್ಟಿಗೆ ಸಂಬಂಧಪಟ್ಟವರು ದಾಖಲೆ ಒದಗಿಸಿದಲ್ಲಿ ಹೆಚ್ಚಿಸಲಾಗುವುದು.

**8)** ಜಾತಿ ಮೀಸಲಾತಿ ಪ್ರಮಾಣ ಪತ್ರಗಳು:–

**ಜಾತಿ ಮೀಸಲಾತಿ ಕೋರಬಯಸುವ**

- ಪ.ಜಾ/ ಪ.ಪಂ. ಅಭ್ಯರ್ಥಿಗಳು ನಮೂನೆ 'ಡಿ' ನಲ್ಲಿ
- ಪ್ರವರ್ಗ–1ರ ಅಭ್ಯರ್ಥಿಗಳು ನಮೂನೆ 'ಇ' ನಲ್ಲಿ ಹಾಗೂ
- 2ಎ, 2ಬಿ, 3ಎ, 3ಬಿ ಅಭ್ಯರ್ಥಿಗಳು ನಮೂನೆ 'ಎಫ್' ನಲ್ಲಿ

  ಸಂಬಂಧಿತ ತಹಶೀಲ್ದಾರ್ ರವರಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು. ಈ ಪ್ರಮಾಣ ಪತ್ರವು ಈ ಹುದ್ದೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು ಹಾಗೂ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರುವ ಅಂದರೆ ಹಿಂದುಳಿದ ವರ್ಗಗಳ ಪ್ರ–2(ಎ), ಪ್ರ–2(ಬಿ), ಪ್ರ–3(ಎ) ಮತ್ತು ಪ್ರ–3(ಬಿ) ವರ್ಗದ ಮೀಸಲಾತಿ ಪ್ರಮಾಣ ಪತ್ರಗಳನ್ನು ಪಡೆದ ದಿನಾಂಕದಿಂದ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೆ 05 ವರ್ಷಗಳ ಅವಧಿಯಲ್ಲಿರಬೇಕು.

- ಅಭ್ಯರ್ಥಿಯ ಹೆಸರುಳ್ಳ ಜನನ ಮತ್ತು ಮರಣಗಳ ನಿಬಂಧಕರಿಂದ ನೀಡಲ್ಪಟ್ಟ ಜನನ ಪ್ರಮಾಣ ಪತ್ರ.

**ಅಂಗವಿಕಲ ಅಭ್ಯರ್ಥಿ:–**

ಸರ್ಕಾರಿ ಅಧಿಸೂಚನೆ ಸಂಖ್ಯೆ:ಡಿಪಿಎಆರ್ 50 ಎಸ್‌ಆರ್‌ಆರ್ 2000, ದಿನಾಂಕ:03–09–2005ರಲ್ಲಿ ಅಂಗವಿಕಲರೆಂದು ಗುರುತಿಸಿರುವ ಕ್ರಮ ಸಂಖ್ಯೆ (iii) ರಿಂದ (vii) ರವರೆಗಿನ (Leprosy cured, Hearing impairment, Locomotor disability, Mental retardation & Mental illness) ನ್ಯೂನತೆಯಲ್ಲಿ ಶೇ.40ಕ್ಕೆ ಕಡಿಮೆ ಇಲ್ಲದಂತೆ ಬಳಲುತ್ತಿರುವ ವ್ಯಕ್ತಿಗಳು.

ಅಂಗವಿಕಲರಿಗೆ ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು ವೈದ್ಯಕೀಯ ಪ್ರಮಾಣ ಪತ್ರವನ್ನು ದಿನಾಂಕ:19–11–2005ರ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ:ಸಿಆಸುಇ 115 ಸೆನೆನಿ 2005ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು. ಇತರೆ ಯಾವುದೇ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು ಪರಿಗಣಿಸುವುದಿಲ್ಲ.

ಈ ಅಂಗವಿಕಲ ಮೀಸಲಾತಿಯಡಿ ಆಯ್ಕೆ ಹೊಂದುವ ಅಭ್ಯರ್ಥಿಗಳು ಸಹ ಈ ನ್ಯೂನತೆಯನ್ನು ಹೊಂದಿದ್ದರೂ ಸದರಿ ಹುದ್ದೆಯ ಕರ್ತವ್ಯ ನಿರ್ವಹಣೆಗೆ ಅಡ್ಡಿ ಉಂಟಾಗದೆಂದು ತಿಳಿಸುವ ದೈಹಿಕ ಅರ್ಹತೆಯ ಪ್ರಮಾಣ ಪತ್ರವನ್ನು ಕರ್ತವ್ಯಕ್ಕೆ ಸೇರುವ ಮುನ್ನ ನೀಡಬೇಕಾಗುತ್ತದೆ.

**ಯೋಜನಾ ನಿರಾಶ್ರಿತ ಅಭ್ಯರ್ಥಿ:–**

ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 23 ಸೆನೆನಿ 99, ದಿನಾಂಕ:23–11–2000ರನ್ವಯ ಯೋಜನೆಗಳಿಂದ ನಿರ್ವಸಿತರಾದ (ಈ ನಿಯಮಗಳು ಜಾರಿಯಾಗುವ 20 ವರ್ಷಕ್ಕೆ ಮುನ್ನ ನಿರ್ವಸಿತರಾದ ಕುಟುಂಬದ ಅಭ್ಯರ್ಥಿಗಳು ಈ ಮೀಸಲಾತಿಗೆ ಅನ್ವಯವಾಗುವುದಿಲ್ಲ). ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು ಸಂಬಂಧಿಸಿದ ತಹಸೀಲ್ದಾರ್‌ರವರಿಂದ ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಪಡೆದಿರಬೇಕು.

**ಸೂಚನೆ:–**

ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು ಹಾಗೂ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರಬೇಕು.

9) ಆಯ್ಕೆ ವಿಧಾನ:–

**ನೇಮಕಾತಿ ಸಮಿತಿಯ ಮುಖಾಂತರ ಸಂದರ್ಶನ ನಡೆಸಿ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.**

10) ಉದ್ಯೋಗ ಮತ್ತು ತರಬೇತಿ ಇಲಾಖೆ ಬೆಂಗಳೂರು ಜಿಲ್ಲಾ ಕಛೇರಿಯಿಂದಲೂ ಸಹ ಅಭ್ಯರ್ಥಿಗಳ ಪಟ್ಟಿಯನ್ನು ತರಿಸಿಕೊಳ್ಳಲಾಗುವುದು.

11) ಅಭ್ಯರ್ಥಿಯು ಅರ್ಜಿಯಲ್ಲಿ ತಪ್ಪು ಅಥವಾ ಸುಳ್ಳು ಹೇಳಿಕೆಗಳನ್ನು ನೀಡಿದಲ್ಲಿ ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿದಲ್ಲಿ ಅಥವಾ ನೇಮಕಾತಿ ಉದ್ದೇಶಗಳಿಗಾಗಿ ಅನುಚಿತ ಮಾರ್ಗವನ್ನು ಅನುಸರಿಸಿದಲ್ಲಿ ಆಯ್ಕೆಗೆ ಅನರ್ಹರಾಗುವರು.

12) ಅರ್ಜಿ ನಮೂನೆಗಳನ್ನು ಅಧಿಸೂಚನೆಯಲ್ಲಿ ನೀಡಲಾದ ನಮೂನೆಯಂತೆ ಪ್ರತಿ ಮಾಡಿಕೊಂಡು ಸಲ್ಲಿಸತಕ್ಕದ್ದು.

13) ಭರ್ತಿ ಮಾಡಿದ ಅರ್ಜಿಗಳನ್ನು ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಇವರಿಗೆ ಪಾವತಿಯಾಗುವಂತೆ ಪಡೆದ ₹5–00ರ ಅಂಚೆ ಆದೇಶ ಹಾಗೂ ಮೀಸಲಾತಿ ಪ್ರಮಾಣ ಪತ್ರ, ಜನನ ಪ್ರಮಾಣ ಪತ್ರಗಳ ಜೆರಾಕ್ಸ್ ಪ್ರತಿ ಹಾಗೂ ಭಾವಚಿತ್ರದೊಂದಿಗೆ ದಿನಾಂಕ:13–04–2012ರ ಒಳಗಾಗಿ ಸಲ್ಲಿಸತಕ್ಕದ್ದು.

ಆಯೋಗದ ಆದೇಶದ ಮೇರೆಗೆ,

**ವಿ.ಬಿ.ಪಾಟೀಲ್**

ಕಾರ್ಯದರ್ಶಿ,

ಕರ್ನಾಟಕ ಲೋಕಸೇವಾ ಆಯೋಗ.

**ಅರ್ಜಿ ನಮೂನೆ**

**ಕರ್ನಾಟಕ ಲೋಕಸೇವಾ ಆಯೋಗದ ಕಛೇರಿಯಲ್ಲಿನ ವಾಚ್‌ಮನ್/ ಸ್ವೀಪರ್/ ಹೋಂ ಆರ್ಡರ್ಲೀ ಹುದ್ದೆಗೆ ಅರ್ಜಿ**

ಭಾವಚಿತ್ರ

1) ಅಭ್ಯರ್ಥಿಯ ಹೆಸರು :

2) ಅಭ್ಯರ್ಥಿಯ ತಂದೆ/ ತಾಯಿ/ ಪೋಷಕ/ :
ಪತಿಯ ಹೆಸರು

3) ಅಂಚೆ ವಿಳಾಸ :

4) ಜನ್ಮ ದಿನಾಂಕ ಹಾಗೂ ವಯಸ್ಸು :
(ಜನನ ಪ್ರಮಾಣ ಪತ್ರದ ದಾಖಲೆ ಲಗತ್ತಿಸಿದೆ)

ಹುಟ್ಟಿದ ಸ್ಥಳ/ ಗ್ರಾಮ/ ಪಟ್ಟಣ
ತಾಲ್ಲೂಕು/ ಜಿಲ್ಲೆ

5) ಕೋರಿರುವ ಮೀಸಲಾತಿ :
ಜಾತಿ/ ವರ್ಗ ಅಂದರೆ ಪರಿಶಿಷ್ಟ ಜಾತಿ/
ಪರಿಶಿಷ್ಟ ಪಂಗಡ/ ಪ್ರವರ್ಗ–I/ IIA/ IIB
IIIA/ IIIB ಅಥವಾ ಸಾಮಾನ್ಯ ವರ್ಗ
(ಪ್ರಮಾಣ ಪತ್ರ ಲಗತ್ತಿಸುವುದು)

6) ಕೋರಿರುವ ಸಮತಳ ಮೀಸಲಾತಿ :
ಮಾಜಿ ಸೈನಿಕ/ ಅಂಗವಿಕಲ/
ಯೋಜನಾ ನಿರಾಶ್ರಿತ ಅಭ್ಯರ್ಥಿ
(ಪ್ರಮಾಣ ಪತ್ರ ಲಗತ್ತಿಸುವುದು )

**ಅಭ್ಯರ್ಥಿಯ ಮುಚ್ಚಳಿಕೆ**

ಈ ಮೇಲೆ ಒದಗಿಸಿರುವ ವಿವರಗಳು ಸರಿ ಹಾಗೂ ನಿಜವೆಂದೂ ಇವು ಸರಿಯಿಲ್ಲವೆಂದು ಮುಂದಿನ ದಿನಗಳಲ್ಲಿ ಕಂಡುಬಂದಲ್ಲಿ ಈ ಹುದ್ದೆಗಳ ನೇಮಕಾತಿಯಿಂದ ಹೊರಹೋಗುವುದಲ್ಲದೆ ದಂಡಾರ್ಹ ಶಿಕ್ಷೆಗೆ ನಾನು ಒಳಪಡುವೆನೆಂಬುದನ್ನು ಅರಿತಿರುತ್ತೇನೆ.

ದಿನಾಂಕ: **( ಅಭ್ಯರ್ಥಿಯ ಸಹಿ)**

ಸ್ಥಳ:

**ಅನುಬಂಧ–1**

**(ಪ.ಜಾ. / ಪ.ಪಂ.ಕ್ಕೆ ಸೇರಿದ ಅಭ್ಯರ್ಥಿಗಳಿಗೆ ಮಾತ್ರ)**

**ನಮೂನೆ–ಡಿ**

**(ನಿಯಮ 3ಎ (2) (3) ನ್ನು ನೋಡಿ)**

**ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳಿಗೆ ಸೇರಿದ ಅಭ್ಯರ್ಥಿಗಳಿಗೆ ನೀಡುವ ಪ್ರಮಾಣ ಪತ್ರಗಳ ನಮೂನೆ**

**ಪ್ರಮಾಣ ಪತ್ರ**

______________________ ರಾಜ್ಯದ / ಕೇಂದ್ರಾಡಳಿತ ಪ್ರದೇಶದ * _______________ ಜಿಲ್ಲೆಯ / ವಿಭಾಗದ ______________ ಗ್ರಾಮ / ಪಟ್ಟಣದ * ನಿವಾಸಿಯಾದ ಶ್ರೀ / ಶ್ರೀಮತಿ _____________ ಎಂಬುವವರ ಮಗ / ಮಗಳಾದ ಶ್ರೀ / ಶ್ರೀಮತಿ _____________ ಇವರು ಅನುಸೂಚಿತ ಜಾತಿ / ಅನುಸೂಚಿತ ಬುಡಕಟ್ಟು * ಎಂದು ಮಾನ್ಯ ಮಾಡಲಾಗಿರುವ ಜಾತಿ / ಬುಡಕಟ್ಟಿಗೆ * ಸೇರಿರುತ್ತಾರೆಂದು ಪ್ರಮಾಣೀಕರಿಸಲಾಗಿದೆ.

- ಸಂವಿಧಾನ (ಅನುಸೂಚಿತ ಜಾತಿಗಳು) ಆದೇಶ, 1950
- ಸಂವಿಧಾನ (ಅನುಸೂಚಿತ ಬುಡಕಟ್ಟುಗಳು) ಆದೇಶ, 1950
- ಸಂವಿಧಾನ (ಅನುಸೂಚಿತ ಜಾತಿ) (ಕೇಂದ್ರಾಡಳಿತ ಪ್ರದೇಶಗಳು) ಆದೇಶ, 1950
- ಸಂವಿಧಾನ (ಅನುಸೂಚಿತ ಬುಡಕಟ್ಟುಗಳು) (ಕೇಂದ್ರಾಡಳಿತ ಪ್ರದೇಶಗಳು) ಆದೇಶ, 1951

  (ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳ ಪಟ್ಟಿ (ಮಾರ್ಪಾಡು) ಆದೇಶ 1956, ಮುಂಬಯಿ ರಾಜ್ಯ, ಪುನರ್ ರಚನಾ ಅಧಿನಿಯಮ, 1960, ಪಂಜಾಬ್ ರಾಜ್ಯ ಪುನರ್ ರಚನಾ ಅಧಿನಿಯಮ, 1966, ಹಿಮಾಚಲ ಪ್ರದೇಶ ರಾಜ್ಯ ಅಧಿನಿಯಮ 1970 ಮತ್ತು ಈಶಾನ್ಯ ಪ್ರದೇಶಗಳ (ಪುನರ್ ರಚನಾ ಅಧಿನಿಯಮ, 1971ರ ಮೂಲಕ ತಿದ್ದುಪಡಿಯಾದಂತೆ).
- ಸಂವಿಧಾನ (ಜಮ್ಮು ಮತ್ತು ಕಾಶ್ಮೀರ) ಅನುಸೂಚಿತ ಜಾತಿಗಳ ಆದೇಶ, 1956
- ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳ (ತಿದ್ದುಪಡಿ) ಅಧಿನಿಯಮ, 1976ರ ಮೂಲಕ ತಿದ್ದುಪಡಿಯಾದಂತೆ ಸಂವಿಧಾನ (ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳ) ಅನುಸೂಚಿತ ಬುಡಕಟ್ಟುಗಳ ಆದೇಶ, 1959
- ಸಂವಿಧಾನ (ದಾದರ್ ಮತ್ತು ನಗರ ಹವೇಲಿ) ಅನುಸೂಚಿತ ಜಾತಿಗಳ ಆದೇಶ, 1962
- ಸಂವಿಧಾನ (ಪಾಂಡಿಚೆರಿ) ಅನುಸೂಚಿತ ಜಾತಿಗಳ ಆದೇಶ, 1964
- ಸಂವಿಧಾನ (ಅನುಸೂಚಿತ ಬುಡಕಟ್ಟುಗಳ) (ಉತ್ತರ ಪ್ರದೇಶ) ಆದೇಶ, 1967
- ಸಂವಿಧಾನ (ಗೋವಾ, ದಮನ್ ಮತ್ತು ದೀವ್) ಅನುಸೂಚಿತ ಜಾತಿ / ಬುಡಕಟ್ಟುಗಳ ಆದೇಶ, 1988
- ಸಂವಿಧಾನ (ನಾಗಾಲ್ಯಾಂಡ್) ಅನುಸೂಚಿತ ಬುಡಕಟ್ಟುಗಳ ಆದೇಶ

2. ಶ್ರೀ / ಶ್ರೀಮತಿ / ಕುಮಾರಿ * ______________ ಮತ್ತು / ಅಥವಾ ಅವನ*/ಅವಳ* ಕುಟುಂಬವು ______ ರಾಜ್ಯ / ಕೇಂದ್ರಾಡಳಿತ ಪ್ರದೇಶದ ______________ ಜಿಲ್ಲಾ / ವಿಭಾಗದ * ______________ ಗ್ರಾಮ / ಪಟ್ಟಣದ ಸಾಮಾನ್ಯ ನಿವಾಸಿ (ಗಳು).

ಸಹಿ:__________

ತಹಸೀಲ್ದಾರ್ __________

ಸ್ಥಳ: ಪದನಾಮ

ದಿನಾಂಕ: ಕಛೇರಿಯ ಮೊಹರಿನೊಂದಿಗೆ

ರಾಜ್ಯ / ಕೇಂದ್ರಾಡಳಿತ ಪ್ರದೇಶ*

* ಅನ್ವಯವಾಗದಿರುವ ಪದಗಳನ್ನು ದಯವಿಟ್ಟು ಬಿಟ್ಟುಬಿಡಿ / ಹೊಡೆದು ಹಾಕಿ.

**ಸೂಚನೆ:–** ಇಲ್ಲಿ ಉಪಯೋಗಿಸಿದ “ ಸಾಮಾನ್ಯ ನಿವಾಸಿಗಳು “ ಎಂಬ ಪದಾವಳಿಯು ಪ್ರಜಾ ಪ್ರಾತಿನಿಧ್ಯ ಅಧಿನಿಯಮ, 1950 ರ 20ನೇ ಪ್ರಕರಣದಲ್ಲಿರುವ ಅರ್ಥವನ್ನೇ ಹೊಂದಿರುತ್ತದೆ.

ಭಾರತ ಸರ್ಕಾರದ ಪತ್ರ ಸಂಖ್ಯೆ:ಬಿಸಿ 12028/2/78 ಎಸ್‌ಸಿಟಿ – 1 ಗೃಹಮಂತ್ರಾಲಯದ ಅನುಸಾರವಾಗಿ, ಅಂಥ ಪ್ರಮಾಣ ಪತ್ರಗಳನ್ನು ನೀಡಲು ಸಕ್ಷಮವಾಗಿರುವುದಕ್ಕಾಗಿ, ಭಾರತ ಸರ್ಕಾರದ (ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ) ಪತ್ರ ಸಂಖ್ಯೆ: 13–2–74 ಇಎಸ್‌ಟಿ (ಎಸ್‌ಸಿಟಿ) ದಿನಾಂಕ 5ನೇ ಆಗಸ್ಟ್ 1975 ರಲ್ಲಿ ನಮೂದಿಸಿದ ಪ್ರಾಧಿಕಾರಿಯು, ರಾಷ್ಟ್ರಪತಿಗಳು ಸಂಬಂಧಪಟ್ಟ ಆದೇಶದ ಅಧಿಸೂಚನೆಯನ್ನು ಹೊರಡಿಸಿದ ಸಮಯದಲ್ಲಿ ಪ್ರಮಾಣ ಪತ್ರಕ್ಕಾಗಿ ಅರ್ಜಿ ಸಲ್ಲಿಸಿದ ವ್ಯಕ್ತಿಯು, ತನ್ನ ಖಾಯಂ ವಾಸ ಸ್ಥಳವನ್ನು ಹೊಂದಿದ್ದ ಸ್ಥಳಕ್ಕೆ ಸೇರಿದವರೊಬ್ಬರಾಗಿರತಕ್ಕದ್ದು. ಅದೇ ರೀತಿಯಲ್ಲಿ, ಒಂದು ತಾಲ್ಲೂಕಿನ ರೆವಿನ್ಯೂ ಪ್ರಾಧಿಕಾರಿಯು ಇನ್ನೊಂದು ತಾಲ್ಲೂಕಿಗೆ ಸೇರಿದ ವ್ಯಕ್ತಿಗಳಿಗೆ ಸಂಬಂಧಪಟ್ಟ ಪ್ರಮಾಣ ಪತ್ರವನ್ನು ನೀಡಲು ಸಕ್ಷಮ ಪ್ರಾಧಿಕಾರಿಯಾಗುವುದಿಲ್ಲ.

**(ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳಿಗೆ ಮಾತ್ರ)**

**ನಮೂನೆ – ಇ**

**(ನಿಯಮ 3ಎ (2) (3) ನ್ನು ನೋಡಿ)**

**ಹಿಂದುಳಿದ ವರ್ಗ (ಪ್ರವರ್ಗ–1)ಗಳಿಗೆ ಸೇರಿದ ಅಭ್ಯರ್ಥಿಗಳಿಗೆ ನೀಡುವ ಪ್ರಮಾಣ ಪತ್ರ**

____________________ ಗ್ರಾಮ / ಪಟ್ಟಣ / ನಗರದ ನಿವಾಸಿಯಾದ ಶ್ರೀ / ಶ್ರೀಮತಿ ____________________ ಇವರ ಮಗ /ಮಗಳು/ಪತಿ/ಪತ್ನಿಯಾದ ಶ್ರೀ / ಶ್ರೀಮತಿ ______________ ಇವರು ಹಿಂದುಳಿದ ವರ್ಗಗಳ (ಪ್ರವರ್ಗ) ____________ ಜಾತಿಯ ____________ ಉಪಜಾತಿಗೆ ಸೇರಿರುತ್ತಾರೆಂದು ಪ್ರಮಾಣೀಕರಿಸಲಾಗಿದೆ.

ಸ್ಥಳ : ತಹಸೀಲ್ದಾರರು

ದಿನಾಂಕ: ______ ತಾಲ್ಲೂಕು

ಕಛೇರಿಯ ಮೊಹರು.

**(ಪ್ರವರ್ಗ–2ಎ, 2ಬಿ, 3ಎ, 3ಬಿ ಗೆ ಸೇರಿದ ಅಭ್ಯರ್ಥಿಗಳಿಗೆ ಮಾತ್ರ)**

**ನಮೂನೆ – ಎಫ್**

**(ನಿಯಮ 3ಎ (2) (3) ನ್ನು ನೋಡಿ)**

**ಪ್ರವರ್ಗ–1 ರ ಹೊರತಾಗಿ, ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ ನೀಡುವ ಆದಾಯ ಮತ್ತು ಜಾತಿ ಪ್ರಮಾಣ ಪತ್ರ**

________________ರಲ್ಲಿ ವಾಸವಾಗಿರುವ ಶ್ರೀ / ಶ್ರೀಮತಿ ________________ ಇವರ ಮಗ/ಮಗಳು/ಪತಿ/ಪತ್ನಿಯಾದ, ಶ್ರೀ / ಶ್ರೀಮತಿ / ಕುಮಾರಿ__________ ಇವರು ಮತ್ತು ಆತನ / ಅವಳ ತಂದೆ ತಾಯಿ/ಪೋಷಕರು/ಪತ್ನಿ / ಪತಿಯು, ಸರ್ಕಾರಿ ಆದೇಶಗಳ ಸಂಖ್ಯೆ:ಎಸ್‌ಡಬ್ಲೂಡಿ 225 ಬಿಸಿಎ 2000 ದಿನಾಂಕ:30–03–2002 ರಲ್ಲಿ ನಿರ್ದಿಷ್ಟ ಪಡಿಸಿದ ಮೇಲುಸ್ತರದ (ಕ್ರೀಮಿ ಲೇಯರ್) ವ್ಯಾಪ್ತಿಯಲ್ಲಿ ಬರುವುದಿಲ್ಲವೆಂದು :

ಅಭ್ಯರ್ಥಿಯಾಗಲಿ ಅಥವಾ ಅತನ / ಆಕೆಯ ತಂದೆ ತಾಯಿ / ಪೋಷಕರಾಗಲಿ / ಪತ್ನಿ / ಪತಿಯಾಗಲಿ, ಸರ್ಕಾರದ ಸೇವೆಯಲ್ಲಿ 1ನೇ ದರ್ಜೆಯ ಅಥವಾ 2ನೇ ದರ್ಜೆಯ ಅಧಿಕಾರಿ– ಯಾಗಿಲ್ಲವೆಂದು ;

ಅಥವಾ

ಸಾರ್ವಜನಿಕ ವಲಯ ಉದ್ಯಮದಲ್ಲಿ ತತ್ಸಮಾನದ ಹುದ್ದೆಯನ್ನು ಹೊಂದಿರುವುದಿಲ್ಲ ;

ಅಥವಾ

ಖಾಸಗಿ ನಿಯೋಜಕರ ಕೈಕೆಳಗೆ, 2ನೇ ದರ್ಜೆಯ ಅಧಿಕಾರಿಯ ಸಂಬಳಕ್ಕಿಂತ (ವೇತನ ಶ್ರೇಣಿ ₹6000–12000/– ಪ್ರಾರಂಭಿಕ ಹಂತ) ಕಡಿಮೆಯಿಲ್ಲದ ಸಂಬಳವನ್ನು ಪಡೆಯುವ ನೌಕರನಾಗಿಲ್ಲವೆಂದು ;

ಅಥವಾ

ಆತನ / ಆಕೆಯ ತಂದೆ ತಾಯಿ/ಪೋಷಕರು/ಪತ್ನಿ / ಪತಿಯ ಆದಾಯವೂ ಎರಡು ಲಕ್ಷ ಮೀರಿರುವುದಿಲ್ಲವೆಂದು ;

ಅಥವಾ

ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961 ರಲ್ಲಿ ನಿಗದಿಪಡಿಸಿರುವಂತೆ ಆತನ / ಆಕೆಯ ತಂದೆ ತಾಯಿ/ಪೋಷಕರು/ಪತ್ನಿ / ಪತಿಯು ಮಾರಾಟ ತೆರಿಗೆದಾರನಲ್ಲ ಅಥವಾ ಆತನ / ಆಕೆಯ ತಂದೆ ತಾಯಿ/ಪೋಷಕ/ಪತ್ನಿ / ಪತಿಯು ಅಥವಾ ಇವರಿಬ್ಬರೂ 10 ಯುನಿಟ್‌ಗಿಂತ ಹೆಚ್ಚಿನ ಕೃಷಿ ಭೂಮಿ ಅಥವಾ 25 ಎಕರೆಗಳಿಗಿಂತ ಹೆಚ್ಚಿನ ಪ್ಲಾಂಟೇಷನ್ ಭೂಮಿಯನ್ನು ಹೊಂದಿರುವುದಿಲ್ಲವೆಂದು ಪ್ರಮಾಣೀಕರಿಸಲಾಗಿದೆ. ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 225 ಬಿಸಿಎ 2000 ದಿನಾಂಕ:30–03–2002 ರ ಅನ್ವಯ ಶ್ರೀ / ಶ್ರೀಮತಿ / ಕುಮಾರಿ ________________ ಇವರು _______ ಜಾತಿಗೆ ______ ಸೇರಿದ ಉಪಜಾತಿಯವರಾಗಿದ್ದು ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 225 ಬಿಸಿಎ 2000 ದಿನಾಂಕ:30–03–2002 ರ ಅನ್ವಯ ಹಿಂದುಳಿದ ವರ್ಗಗಳ ಪ್ರವರ್ಗ _________ (2ಎ, 2ಬಿ, 3ಎ, 3ಬಿ) ಸೇರಿರುತ್ತಾರೆ.

ಸ್ಥಳ : ತಹಸೀಲ್ದಾರರು

ದಿನಾಂಕ: _______ ತಾಲ್ಲೂಕು

ಕಛೇರಿಯ ಮೊಹರು.

## ಸರ್ಕಾರದ ಸುತ್ತೋಲೆ ಸಂಖ್ಯೆ:ಸಿಆಸುಇ 44 ಸೆನೆನಿ 2001, ದಿನಾಂಕ:27–07–2001

### ನಮೂನೆ–3

### ಯೋಜನೆಗಳಿಂದ ನಿರ್ವಸಿತರಾದ ಕುಟುಂಬದ ಅಭ್ಯರ್ಥಿ

ಶ್ರೀ/ಶ್ರೀಮತಿ .................................................................................. ಎಂಬುವವರ ಮಗ/ ಮಗಳು/ ಪತಿ/ ಪತ್ನಿ/ ಶ್ರೀ/ಶ್ರೀಮತಿ/ಕುಮಾರಿ ................................................................... ಜಿಲ್ಲೆ ............................................. ತಾಲ್ಲೂಕು ಗ್ರಾಮದಲ್ಲಿ ............................................................ ವಾಸವಾಗಿರುವ ಇವರು : ಇವರ ಕುಟುಂಬದವರ ಅವಲಂಬಿತರಾಗಿದ್ದ ಈ ಕೆಳಕಂಡ ಆಸ್ತಿಯನ್ನು ........................................... ಯೋಜನೆಗಾಗಿ .......................... ಇಸವಿಯಲ್ಲಿ ಸ್ವಾಧೀನಪಡಿಸಿಕೊಳ್ಳಲಾಗಿದೆ ಎಂದು ಈ ಮೂಲಕ ಪ್ರಮಾಣೀಕರಿಸಿದೆ:–

ಅ) * * ವಾಸಿಸುವ ಮನೆ ಮತ್ತು ತಾವು ಅವಲಂಭಿತರಾಗಿದ್ದ ಅವರ ಕೃಷಿ ಭೂಮಿಯ ಅರ್ಧದಷ್ಟು

ಆ) * * ಯೋಜನೆಗೆ ಮೊದಲು ಭೂಮಿಯನ್ನು ಹೊಂದಿರದೆ: ಯೋಜನೆಯಿಂದ ತಾವು ವಾಸಿಸುವ ಮನೆ:

ಇ) * * ತಾವು ಅವಲಂಬಿತರಾಗಿದ್ದ ತಮ್ಮ ಕೃಷಿ ಭೂಮಿಯ ಅರ್ಧದಷ್ಟು ಅಥವಾ ಅದಕ್ಕಿಂತ ಕಡಿಮೆ ಕೃಷಿ ಭೂಮಿ:

ಈ) * * ಇತರ ಇನ್ನಾವುದೇ ಪ್ರಕರಣದಲ್ಲಿ ಯೋಜನೆಯಿಂದ ನಿರ್ವಸಿತರಾದವರು.

ಸ್ಥಳ :

ದಿನಾಂಕ : ತಹಶೀಲ್ದಾರ್

ತಾಲ್ಲೂಕು

ಕಛೇರಿಯ ಮೊಹರು

## ಕರ್ನಾಟಕ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ:ಸಿಆಸುಇ 115 ಸೆನೆನಿ 2005, ದಿನಾಂಕ:19–11–2005

### CERTIFICATE FOR THE PERSONS WITH DISABILITIES

This is to certify that Sri/ Smt / Kum .............................................................................................................. son/ wife/ daughter of Shri....................................................................................... Age ............ old, male / female, Registration No............................................. is a case of ........................ He/ She is physically disabled/ visual disabled/ speech & hearing disabled and has ..................................... % (..................................... percent) permanent (physical impairment, visual impairment, speech & hearing impairment) in relation of his/ her .................................

**Note:**

1. This condition is progressive/ non-progressive/ likely to improve/ not likely to improve.*

2. Re-assessment is not recommended/ is recommended after a period of .................................. months/ years.*

* Strike out which is not applicable.

(Recent Attested

Photograph showing

the disability

affixed here)

| | | |
|---|---|---|
| Sd/- | Sd/- | Sd/- |
| (Doctor) | (Doctor) | (Doctor) |
| (Seal) | (Seal) | (Seal) |

Countersigned by the

Medical Superintendent CMO/ Head

of Hospital (with seal)

Signature / Thumb impression

of the disabled person.

**PR - 56**